ಶ್ರೀಸುಯಮೀರಾಘವೇಂದ್ರ
ಪ್ರಕಾಶನ ಸಂಖ್ಯೆ - 38



ಶ್ರೀಸುಶೀಲೇಂದ್ರವಿಜಯಮಾಲಾ
ಸಂಖ್ಯೆ - 28

**ಕಮಲೇಶ ಕುಸುಮ - 18**

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಃ

# ಕಾಠಕೋಪನಿಷತ್ ಖಂಡಾರ್ಥಃ

ಅನುವಾದಕರು :

ವಿದ್ವಾನ್ ಪ್ರೊ. ಸಾಣೂರು ಭೀಮಭಟ್ಟರು

ಪ್ರಕಾಶಕರು :

ಶ್ರೀಸುಯಮೀರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು - ಬೆಂಗಳೂರು

**2010**

# ಸಂಸ್ಥೆಯ ಸಾಮ್ರಾಟ್ ಪೋಷಕರು




ಪೊಡವಿಗೊಡೆಯರಾದ ಶ್ರೀಗುರುರಾಯರನ್ನು ಹೃದಯಗುಡಿಯಲ್ಲಿ ಅಡಗಿಸಿ ಎಂದೂ ಮಾಸದ
ಮೃದು ಮಧುರ ಮುಗ್ಧ ನಗೆಯನ್ನು ಹೊರಸೂಸುತ್ತ ತಮ್ಮ ಅಮೃತಹಸ್ತದ ಹಿಡಿಯಿಂದ ಮಂತ್ರಾಕ್ಷತೆಯನ್ನು
ನೀಡುತ್ತಾ ತೇಡಿಬಂದು ಬೇಡಿದವರ ಇಷ್ಟಾರ್ಥಗಳನ್ನು ಇಡೇರಿಸುತ್ತಾ ಅನಂತ ಭಕ್ತಸಮೂಹದಿಂದ

**'ನಡೆದಾಡುವ ರಾಯರು'** ಎಂದು

ಪ್ರಾಥಃಸ್ಮರಣೀಯರಾಗಿ ಭಕ್ತಿ ಗೌರವದಿಂದ ಪೂಜಿಸಲ್ಪಡುತ್ತಿರುವ

**'ಶ್ರೀ ರಾಯರ ಕರುಣೆಯ ಕಂದರಾದ' ಪರಮಪೂಜ್ಯ**

**108 ಶ್ರೀ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರು.**

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

# ಗ್ರಂಥಸಮರ್ಪಣೆ

ಭಾಷ್ಯಕಾರರಾಗಿ, ಟೀಕಾಕಾರರಾಗಿ, ಟಿಪ್ಪಣಿಕಾರರಾಗಿ,
ಶ್ರೀಮನ್ಮಧ್ವಸಿದ್ಧಾಂತವೆಂಬ ತತ್ತ್ವಜ್ಞಾನ ಕಲ್ಪವೃಕ್ಷವನ್ನು
ತಮ್ಮ ಅಪೂರ್ವ, ಅಸದೃಶ, ಶ್ರೇಷ್ಠ ಗ್ರಂಥಗಳಿಂದ
ಫಲಭರಿತವನ್ನಾಗಿಸಿ, ಆ ಪರಿಮಳಯುಕ್ತವಾದ
ಸತ್ಫಲದ ಸವಿಜೇನಿನ ತತ್ತ್ವಸುಧೆಯನ್ನು ವಸುಧೆಯೊಳು
ಸುಧೀಜನರು ಆಸ್ವಾದಿಸಿ ಆತ್ಮೋದ್ಧಾರದ ಅನುಭವವನ್ನು
ಹೊಂದಿ, ಆನಂದಿಸುವಂತೆ ಅನುಗ್ರಹಿಸಿ
ಆಶೀರ್ವದಿಸುತ್ತಿರುವ ಅತ್ಯಂತ ದಯಾಳುಗಳಾದ
ಜಗದ್ಗುರು ಶ್ರೀಮದ್ರಾಘವೇಂದ್ರತೀರ್ಥ ಗುರುಸಾರ್ವಭೌಮರ
ಇಪತ್ತೈದು ಶ್ರೇಷ್ಠಗ್ರಂಥಗಳಿಂದ ಸಮಲಂಕೃತವಾದ "ಶ್ರೀ ಗುರುರಾಜಸಂಪುಟಮ್"
ಎಂಬ ಪವಿತ್ರವಾದ ಗ್ರಂಥಪುಷ್ಪವನ್ನು
ಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ 75ನೇ ವರ್ಷದ
ವರ್ಧಂತ್ಯುತ್ಸವದ ಸವಿನೆನಪಿಗಾಗಿ ಹಾಗೂ
ಶ್ರೀಸುಯಮಿ ರಾಘವೇಂದ್ರ ಸಂಶೋಧನ ಕೇಂದ್ರದ
ಪಂಚಾದಶ ಸಂಸ್ಥಾಪನಾ ಮಹೋತ್ಸವದ ಸಂಸ್ಮರಣಾರ್ಥವಾಗಿ
ಶ್ರೀರಾಯರ ಪರಮಪಾವನ ಚರಣಕಮಲಗಳಲ್ಲಿ
ಪರಮಪೂಜ್ಯ ಶ್ರೀಸುಯತೀಂದ್ರತೀರ್ಥ ಶ್ರೀಪಾದಂಗಳವರ
ಅಮೃತಹಸ್ತಗಳಿಂದ ಸದ್ಭಕ್ತಿ-ಶ್ರದ್ಧಾದರ
ನಮನಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ.



ಶ್ರೀಗುರುರಾಜರ ಚರಣಸೇವಕರು

ಪ್ರಕಾಶಕರು
ಶ್ರೀಸುಯಮೀ-ರಾಘವೇಂದ್ರ ಸಂಶೋಧನ ಕೇಂದ್ರ
ನಂಜನಗೂಡು-ಬೆಂಗಳೂರು

ದಿನಾಂಕ 23-09-2010
ಮಂತ್ರಾಲಯಂ

## ಸಂಶೋಧನ ಕೇಂದ್ರದ ಸಾಮ್ರಾಟ್ ಪೋಷಕರು



ಶ್ರೀ ಸುಯಮೀಂದ್ರತೀರ್ಥರು

# ಸಾಮ್ರಾಟ್ ಪೋಷಕರು



ಶ್ರೀ ಸುಜಯೀಂದ್ರತೀರ್ಥರು



ಸಾಮ್ರಾಟ್ ಪೋಷಕರು : ಶ್ರೀ ಸುಶಮೀಂದ್ರತೀರ್ಥರು ಹಾಗೂ
ಶ್ರೀ ಸುಯತೀಂದ್ರತೀರ್ಥರು

# ಸಂಶೋಧನ ಕೇಂದ್ರದ ಸ್ಫೂರ್ತಿಮೂರ್ತಿಗಳು



ರಾಜಾ. ಶ್ರೀ. ವೇಣುಗೋಪಾಲಾಚಾರ್ಯ



ರಾಜಾ. ಶ್ರೀ. ಗುರುರಾಜಾಚಾರ್ಯ



ರಾಜಾ. ಶ್ರೀ. ಲಕ್ಷ್ಮೀನಾರಾಯಣಾಚಾರ್ಯ



ಡಾ. ಹುಲಿ. ಕೃ. ವೇದವ್ಯಾಸಾಚಾರ್ಯ

ಸಂಶೋಧನ ಕೇಂದ್ರದ ಸಂಸ್ಥಾಪಕರು

"ಶ್ರೀರಾಘವೇಂದ್ರಗುರುವಂಶಭೂಷಣಂ"

ರಾಜಾ. ಶ್ರೀ. ಗುರುರಾಜಾಚಾರ್ಯ



|| ಶ್ರೀಮೂಲರಾಮೋ ವಿಜಯತೇ || || ಶ್ರೀಗುರುರಾಜೋ ವಿಜಯತೇ ||

ಶ್ರೀಹಂಸನಾಮಕ ಪರಮಾತ್ಮಪ್ರವರ್ತಿತ ಜ್ಞಾನಪೀಠಾಧ್ಯಕ್ಷರಾದ
ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನಾಧೀಶ್ವರರಾದ
ಶ್ರೀರಾಘವೇಂದ್ರಸ್ವಾಮಿಗಳವರ ಮಠದ ದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ 108 ಶ್ರೀಸುಜಯೀಂದ್ರತೀರ್ಥಶ್ರೀಪಾದಂಗಳವರ
ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ 108 ಶ್ರೀಸುಶಮೀಂದ್ರತೀರ್ಥಶ್ರೀಪಾದಂಗಳವರ
ವರಕುಮಾರಕರಾದ

**ಪರಮಪೂಜ್ಯ ಶ್ರೀ 108 ಶ್ರೀಸುಯತೀಂದ್ರತೀರ್ಥಶ್ರೀಪಾದಂಗಳವರ**

75 ನೇ ವರ್ಷದ ವರ್ಧಂತ್ಯುತ್ಸವದ ಸವಿನೆನಪಿಗಾಗಿ ಪ್ರಕಾಶಿಸಲ್ಪಟ್ಟ

# ಶ್ರೀಗುರುರಾಜರ ಗ್ರಂಥರತ್ನ

*|| ಜೀಯಾತ್ ಶ್ರೀಸುಯತೀಂದ್ರತೀರ್ಥಸಂಯಮಿಮಣೀ ವೇದಾಂತರಾಜ್ಯೇ ಚಿರಮ್ ||*

|| ಶ್ರೀಃ ||

|| ಶ್ರೀಮೂಲರಾಮೋ ವಿಜಯತೇತರಾಮ್ ||

|| ಶ್ರೀಗುರುರಾಜೋ ವಿಜಯತೇ ||

## ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮವಿರಚಿತಃ

# ಕಾಠಕೋಪನಿಷತ್ ಖಂಡಾರ್ಥಃ

ಕನ್ನಡಾನುವಾದ :

**ವಿದ್ವಾನ್ ಪ್ರೊ. ಸಾಣೂರು ಭೀಮಭಟ್ಟರು**

ಈಶ, ಕೇನ, ಪ್ರಶ್ನ, ಮುಂಡಕ (ಅಥರ್ವಣ), ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ ಮತ್ತು ಬೃಹದಾರಣ್ಯಕಗಳೆಂದು ಪ್ರಸಿದ್ಧವಾದ ದಶೋಪನಿಷತ್ತುಗಳಲ್ಲಿ ಕಾಠಕೋಪನಿಷತ್ ಅಥವಾ ಕಠೋಪನಿಷತ್ ಎಂದು ಪ್ರಸಿದ್ಧವಾದ ಈ ಉಪನಿಷತ್ತು ಕೃಷ್ಣಯಜುಸ್ಸಂಹಿತೆಯ ಕಠ ಶಾಖೆಗೆ ಸೇರಿದೆ. ಈ ಉಪನಿಷತ್ತಿಗೆ ದ್ವೈತಸಿದ್ಧಾಂತ ಪ್ರತಿಷ್ಠಾಪನಾಚಾರ್ಯರಾದ ಶ್ರೀಮದಾನಂದತೀರ್ಥರು ಭಾಷ್ಯವನ್ನು ಬರೆದಿದ್ದಾರೆ. ಆ ಭಾಷ್ಯಕ್ಕೆ ವ್ಯಾಸತೀರ್ಥೀಯ, ಪ್ರಕಾಶಿಕಾ ಮತ್ತು ವೇದೇಶತೀರ್ಥೀಯ ಎಂಬುದಾಗಿ ಮೂರು ಟಿಪ್ಪಣಿಗಳಿವೆ. ಆದರೆ ಭಾಷ್ಯವು ಗಂಭೀರವಾಗಿಯೂ, ಪ್ರಮಾಣ-ವಚನಗುಂಭಿತವಾಗಿಯೂ ಇರುವುದರಿಂದ ಉಪನಿಷತ್ತಿನ ಪ್ರತಿಯೊಂದು ಖಂಡದ ಸಾರಾರ್ಥವು ಸಾಧಾರಣ ಜಿಜ್ಞಾಸುಗಳಿಗೆ ತಿಳಿಯಲು ಬಹಳ ಕಷ್ಟವಾಗುತ್ತದೆ. ಆದ್ದರಿಂದ ಟಿಪ್ಪಣ್ಯಾಚಾರ್ಯ ಚಕ್ರವರ್ತಿಗಳೆಂದು ಪ್ರಸಿದ್ಧರಾದ ಪರಮದಯಾಳುಗಳಾದ, ಮಂತ್ರಾಲಯಸ್ಥ ದಿವ್ಯ ವೃಂದಾವನದಲ್ಲಿ ವಿರಾಜಮಾನರಾದ ಶ್ರೀ ಶ್ರೀ ರಾಘವೇಂದ್ರ ಗುರುಸಾರ್ವಭೌಮರು ಭಾಷ್ಯಾದಿಗಳಲ್ಲಿ ಹೇಳಿರುವ ಈ ಉಪನಿಷತ್ತಿನ ಅರ್ಥಸಂಗ್ರಹವನ್ನು ಮಾಡಿದ್ದಾರೆ. ಇದನ್ನು ಖಂಡಾರ್ಥವೆಂದು ಕರೆಯುವ ವಾಡಿಕೆಯಿದೆ. ಶ್ರೀ ಗುರುರಾಜರು ಈ ಉಪನಿಷತ್ತಿಗೆ ಮಾತ್ರವೇ ಅಲ್ಲ, ಉಳಿದ ಒಂಭತ್ತು ಉಪನಿಷತ್ತುಗಳಿಗೂ ಖಂಡಾರ್ಥವನ್ನು ಬರೆದು ದಶೋಪನಿಷತ್ ಖಂಡಾರ್ಥ ಕರ್ತೃಗಳೆಂದು ಪ್ರಸಿದ್ಧರಾಗಿದ್ದಾರೆ.

ಪ್ರಕೃತ ಅವರು ಕಾಠಕ ಎಂಬ ಹೆಸರಿನ ಈ ಉಪನಿಷತ್ತಿನ ಅರ್ಥವನ್ನು ಸಂಗ್ರಹಿಸಲು ಉದ್ಯುಕ್ತರಾಗಿ ಉಪನಿಷತ್ತಿನಿಂದ ಪ್ರತಿಪಾದಿತವಾದ ಗುಣಗಳಿಂದ ಕೂಡಿರುವ ಪರಮಾತ್ಮನ ನಮಸ್ಕಾರ ರೂಪವಾದ ಮಂಗಳವನ್ನು ಮಾಡಿದ್ದಾರೆ.

### ಮಂಗಳಾಚರಣೆ

**ಸಮಸ್ತಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।**
**ನಮಃ ಶ್ರೀಪ್ರಾಣನಾಥಾಯ ವಾಮನಾಯೇಷ್ಟದಾಯಿನೇ ॥**

ಶ್ರೀಮನ್ನಾರಾಯಣನು ಎಲ್ಲಾ ಗುಣಗಳಿಂದ ಪರಿಪೂರ್ಣನಾಗಿದ್ದಾನೆ. ಸಮಸ್ತ ದೋಷಗಳಿಂದ ಬಹುದೂರ-ನಾಗಿದ್ದಾನೆ. ಲಕ್ಷ್ಮೀದೇವಿ ಮತ್ತು ಮುಖ್ಯಪ್ರಾಣದೇವರಿಗೆ ಸ್ವಾಮಿಯಾಗಿದ್ದಾನೆ. ಭಕ್ತರ ಎಲ್ಲಾ ಅಭಿಲಾಷೆಗಳನ್ನು

ನೆರವೇರಿಸುವ ವಾಮನ ಎಂಬ ಹೆಸರಿನಿಂದ ಈ ಉಪನಿಷತ್ತಿನಲ್ಲಿ ಪ್ರತಿಪಾದ್ಯನಾದ ಅಂತಹ ಶ್ರೀಹರಿಗೆ ನಮಸ್ಕಾರವು ಎಂದು ಈ ಮಂಗಳ ಪದ್ಯದ ತಾತ್ಪರ್ಯ.

ಹೀಗೆ ಮಂಗಳ ಮಾಡಿ ಅನಂತರ ಗುರುವರ್ಯರು ಈ ಉಪನಿಷತ್ತಿನ ಋಷಿ, ಛಂದಸ್, ದೇವತೆಗಳನ್ನು ನಿರ್ದೇಶಿಸಿ ಪ್ರತಿಯೊಂದು ಉಪನಿಷನ್ಮಂತ್ರದ ಅರ್ಥವನ್ನು ಸಂಗ್ರಹಿಸಿ ಹೇಳುತ್ತಾರೆ.

**ಅಸ್ಯಾಃ ಕಾಠಕೋಪನಿಷದಃ ಯಮನಚಿಕೇತಸಂವಾದರೂಪತ್ವಾದ್ ಯಮದೇವೋಽಸ್ಯಾಃ ಋಷಿಃ। ವಾಕ್ಯೇತರೇಷು 'ಪೀತೋದಕಾः' ಇತ್ಯಾದಿಷು ಛಂದೋಬದ್ಧೇಷು ಅಕ್ಷರಗಣನಯಾ ಅನುಷ್ಟುಬಾದಿ-ಶ್ಛಂದಃ। ದೇವತಾ ತು ವಾಮನಾಖ್ಯೋ ಹರಿಃ ಧ್ಯೇಯಃ।**

**ಅನಂತಲೋಕಾಪ್ತಿಮಿತ್ಯಾದಿನಾ ಬ್ರಹ್ಮವಿದ್ಯಾಂ ವಕ್ತುಂ ಶ್ರೋತುಃ ಶ್ರದ್ಧಾಜನನಾಯ ಆಖ್ಯಾ-ಯಿಕಾಮಾಹ ವೇದಪುರುಷಃ - ಉಶನ್ನಿತ್ಯಾದಿನಾ।**

ಈ ಕಾಠಕೋಪನಿಷತ್ತು ಯಮ ಮತ್ತು ನಚಿಕೇತರ ಸಂವಾದರೂಪವಾದುದರಿಂದ ಯಮಧರ್ಮರಾಜರು ಈ ಉಪನಿಷತ್ತಿಗೆ ಋಷಿಯೆಂದು ತಿಳಿಯಬೇಕು.

ಈ ಉಪನಿಷತ್ತಿನಲ್ಲಿ ಕೆಲವು ಗದ್ಯಗಳಿವೆ. ಉಶನ್ ಹ ವೈ ವಾಜಶ್ರವಸಃ ಇತ್ಯಾದಿಗಳು ಗದ್ಯರೂಪವಾದ ವಾಕ್ಯಗಳು, ಅವುಗಳನ್ನು ಬಿಟ್ಟು ಉಳಿದ ಪೀತೋದಕಾ ಜಗ್ಧತೃಣಾಃ ಇತ್ಯಾದಿ ಪದ್ಯರೂಪವಾದ ಮಂತ್ರಗಳಲ್ಲಿ ಅಕ್ಷರಗಳನ್ನು ಲೆಕ್ಕ ಮಾಡಿ ಅನುಷ್ಟುಬ್ ಮುಂತಾದ ಛಂದಸ್ಸುಗಳನ್ನು ತಿಳಿಯಬೇಕು.

ವಾಮನರೂಪಿಯಾದ ಶ್ರೀಹರಿಯು ಈ ಉಪನಿಷತ್ತಿಗೆ ದೇವತೆ ಎಂದು ತಿಳಿಯಬೇಕು.

"ಅನಂತಲೋಕಾಪ್ತಿಮಥೋ ಪ್ರತಿಷ್ಠಾಂ" ಎಂಬ ಮಂತ್ರದಿಂದ ಆರಂಭಿಸಿ ಬ್ರಹ್ಮವಿದ್ಯೆಯನ್ನು ಯಮದೇವರು ನಚಿಕೇತನಿಗೆ ಉಪದೇಶಿಸುತ್ತಾರೆ. ಅದಕ್ಕಿಂತಲೂ ಮೊದಲು ಶ್ರೋತೃಗಳಿಗೆ ಶ್ರದ್ಧೆಯನ್ನುಂಟುಮಾಡಲು ವೇದಪುರುಷನು ಒಂದು ಕಥೆಯನ್ನು ಹೇಳುತ್ತಾನೆ.

# ಕಾಠಕೋಪನಿಷತ್ತು

## ಪ್ರಥಮವಲ್ಲೀ

### ಉಶನ್ ಹ ವೈ ವಾಜಶ್ರವಸಃ ಸರ್ವವೇದಸಂ ದದೌ।

**ವಾಜಶ್ರವಸಃ ನಪ್ತೃರೂಪಗೋತ್ರಾಪತ್ಯಂ ವಾಜಶ್ರವಸಃ। ತಸ್ಯಾಪತ್ಯಮಿತ್ಯಣ್‌ಪ್ರತ್ಯಯಃ, ಸ ಉದ್ದಾ-ಲಕನಾಮಾ। ಉಶನ್ ವಶಕಾಂತೌ। ಗ್ರಹಿಜ್ಯಾವಯೀತ್ಯಾದಿನಾ ಸಂಪ್ರಸಾರಣಮ್। ಶತ್ರಂತಮ್। ಸ್ವರ್ಗಲೋಕಮಿಚ್ಛನ್ ಇತ್ಯರ್ಥಃ। ಸರ್ವವೇದಸಂ ಸರ್ವಸ್ವಮ್। ದದೌ ಬ್ರಾಹ್ಮಣೇಭ್ಯೋ ದತ್ತ-ವಾನ್। ಹ ವೈ ಪ್ರಸಿದ್ಧಮೇತತ್।**

ವಾಜಶ್ರವಸ್ ಎಂಬ ಋಷಿಯ ಮೊಮ್ಮಕ್ಕಳಾದ ಉದ್ದಾಲಕರೆಂಬುವವರು ಸ್ವರ್ಗಲೋಕವನ್ನು ಪಡೆಯಲು ಬಯಸಿ ಒಂದು ಯಾಗವನ್ನು ಪ್ರಾರಂಭಿಸಿದರು. ಆ ಯಾಗದಲ್ಲಿ ಬ್ರಾಹ್ಮಣರಿಗೆ ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡಲು ಪ್ರಾರಂಭಿಸಿದರು. ಈ ವಿಷಯವು ಪ್ರಸಿದ್ಧವಾದುದು.

**ತಸ್ಯ ಹ ನಚಿಕೇತಾ ನಾಮ ಪುತ್ರ ಆಸ ।**

**ತಸ್ಯ ಹ ಪ್ರಸಿದ್ಧಸ್ಯ ವಾಜಶ್ರವಸಸ್ಯ ನಚಿಕೇತಾಃ ನಚಿಕೇತೋನಾಮಕಃ ಪುತ್ರಃ ಆಸ ಬಭೂವ । ನಾಮ ಪ್ರಸಿದ್ಧಮ್ । 'ಅಸ್ತೇರ್ಭೂರ್'ರಿತ್ಯೇಷ ವಿಧಿಃ ಛಾಂದಸತ್ವಾನ್ ನ ಭವತಿ । ತಿಙಂತಪ್ರತಿರೂಪಕ-ಮವ್ಯಯಂ ವಾ ।**

ಆ ಪ್ರಸಿದ್ಧರಾದ ವಾಜಶ್ರವಸರಿಗೆ ನಚಿಕೇತನೆಂಬ ಮಗನಿದ್ದನೆಂಬುದೂ ಪ್ರಸಿದ್ಧವಾದ ವಿಷಯವಾಗಿದೆ.

**ತಂ ಹ ಕುಮಾರಂ ಸಂತಂ ದಕ್ಷಿಣಾಸು**
**ನೀಯಮಾನಾಸು ಶ್ರದ್ಧಾऽऽವಿವೇಶ ॥ 1 ॥**

**ತಂ ಕುಮಾರಂ ಸಂತಂ ಬಾಲ್ಯೇ ವಯಸಿ ಸ್ಥಿತಂ ಶ್ರದ್ಧಾ ಆಸ್ತಿಕ್ಯಬುದ್ಧಿಃ ಆವಿವೇಶ ಪ್ರವಿವೇಶ । ಶ್ರದ್ಧಾವಾನ್ ಬಭೂವೇತ್ಯರ್ಥಃ । ಕದೇತ್ಯತ ಉಕ್ತಂ ದಕ್ಷಿಣಾಸ್ವಿತಿ । ಪಿತ್ರಾ ಬ್ರಾಹ್ಮಣೇಭ್ಯೋ ದಕ್ಷಿಣಾಸು ದೀಯಮಾನಾಸ್ವಿತ್ಯರ್ಥಃ । ನಾನಾವಿಧಜರಠನಿರ್ವೀರ್ಯಗವಾದ್ಯನುಪಯುಕ್ತವಸ್ತುದಾನಸಮಯೇ । ಅನುಪಯುಕ್ತಗವಾದಿಕಮಸ್ವರ್ಗ್ಯಂ ಕಿಮರ್ಥಂ ದದಾತಿ ಪಿತಾ ? । ನ ದೇಯಮಿತಿ ವದಾಮೀತಿ ಪುತ್ರಸ್ಯ ಬುದ್ಧಿರಾಸೀದಿತಿ ಭಾವಃ ।**

ಆಗ ಗೋದಾನವನ್ನು ಮಾಡಲು ಬಯಸಿ ಉದ್ದಾಲಕರು ಅನೇಕ ಗೋವುಗಳನ್ನು ತರಿಸಿದರು. ಅವುಗಳನ್ನು ಅವರು ದಾನಮಾಡಲು ಪ್ರಾರಂಭಿಸಿದಾಗ ಎಳೆಯ ವಯಸ್ಸಿನವನಾದರೂ ನಚಿಕೇತನು ಆಸ್ತಿಕ್ಯಬುದ್ಧಿಯುಳ್ಳವನಾದನು. ತಂದೆಯು ಅನೇಕ ವಿಧವಾದ ಮುದಿಯಾದ ಹಸುಗಳನ್ನೂ, ಹಾಲು ಕೊಡಲಾರದ ಅಸಮರ್ಥವಾದ ಹಸುಗಳನ್ನೂ, ಇನ್ನೂ ಹೀಗೆಯೇ ಅನುಪಯುಕ್ತವಾದ ವಸ್ತುಗಳನ್ನೂ ದಾನಮಾಡುತ್ತಿದ್ದಾಗ ನಚಿಕೇತನು ಮನಸ್ಸಿನಲ್ಲಿ ಆಲೋಚಿಸಿದನು. ಇಂತಹ ವಸ್ತುಗಳ ದಾನವು ಸ್ವರ್ಗಪ್ರಾಪ್ತಿಗೆ ಕಾರಣವಾಗುವುದಿಲ್ಲ. ಆದರೂ ನನ್ನ ತಂದೆಯು ಇಂತಹ ದಾನವನ್ನು ಏತಕ್ಕೆ ಮಾಡುತ್ತಿದ್ದಾನೆ ? ಅಪ್ಪಾ ಇಂತಹ ದಾನ ಮಾಡಬೇಡವೆಂದು ಹೇಳುತ್ತೇನೆ ಎಂಬ ಬುದ್ಧಿಯು ನಚಿಕೇತನಿಗೆ ಉಂಟಾಯಿತೆಂದು ತಾತ್ಪರ್ಯ.

**ಶ್ರದ್ಧಾವಿಶಿಷ್ಟತ್ವಮೇವ ವ್ಯನಕ್ತಿ- ಪೀತೋದಕಾ ಇತ್ಯಾದಿನಾ ।**

**ಪೀತೋದಕಾ ಜಗ್ಧತೃಣಾ ದುಗ್ಧದೋಹಾ ನಿರಿಂದ್ರಿಯಾಃ ।**
**ಅನಂದಾ ನಾಮ ತೇ ಲೋಕಾಃ ತಾನ್ ಸ ಗಚ್ಛತಿ ತಾ ದದತ್ ॥ 2 ॥**

**ಪೀತಮೇವ ಉದಕಂ ಯಾಭಿಃ ನ ತು ಪಾತವ್ಯಮಸ್ತಿ ತಾಃ ಪೀತೋದಕಾಃ । ಜಗ್ಧಮೇವ ಭಕ್ಷಿತ-ಮೇವ ತೃಣಂ ನ ತು ಜಗ್ಧವ್ಯಮಸ್ತಿ ಯಾಭಿಸ್ತಾಃ ಜಗ್ಧತೃಣಾಃ । ದುಹ್ಯತ ಇತಿ ದೋಹಃ, ಕರ್ಮಣಿ ಘಞ್ ಕ್ಷೀರಮ್ । ದುಗ್ಧ ಏವ ದೋಹೋ ಯಾಸಾಂ ನ ತು ದೋಗ್ಧವ್ಯಮಸ್ತಿ ತಾಃ ದುಗ್ಧದೋಹಾಃ । ನಿರಿಂದ್ರಿಯಾಃ ನಿರ್ವೀರ್ಯಾಃ, ದುರ್ಬಲಾ ಇತಿ ಯಾವತ್ । ತಾಃ ಉಕ್ತರೂಪಾಃ ಗಾಃ ದದತ್ ಪ್ರಯಚ್ಛನ್ ನ ಪುಮಾನ್ ತಾನ್ ಲೋಕಾನ್ ಗಚ್ಛತಿ ತೇ ಪ್ರಸಿದ್ಧಾಃ ಅನಂದಾಃ ಅವಿದ್ಯಮಾನಸುಖಾಃ । ಯ ಇತಿ ಶೇಷಃ । ಯೇ ಲೋಕಾಸ್ತಾನ್ ಇತ್ಯೇವಂ ಶ್ರದ್ಧಾ ಆವಿವೇಶೇತ್ಯರ್ಥಃ । ಏವಂ ಶ್ರದ್ಧಾವಿಶಿಷ್ಟಃ ಸಃ ಪುತ್ರಃ । ಪಿತರಮುವಾಚ । ಹ ಕಿಲೇತ್ಯರ್ಥಃ ॥ 2 ॥**

ನಚಿಕೇತನು ಅಲ್ಲಿದ್ದ ಹಸುಗಳನ್ನು ನೋಡಿದನು. ಅವುಗಳಲ್ಲಿ ಕೆಲವು ಈಗ ಇದುವರೆಗೆ ನೀರು ಕುಡಿದುದು ಎಷ್ಟೋ ಅಷ್ಟೇ ಹೊರತು ಪುನಃ ನೀರು ಕುಡಿಯಲಾರವು. ಮುಂದಿನ ಕ್ಷಣಗಳಲ್ಲಿ ಅವು ಬದುಕಿರುತ್ತವೆ ಎಂದು ಹೇಳಲೂ ಸಾಧ್ಯವಿಲ್ಲ. ಕೆಲವು ಹಸುಗಳು ಅಲ್ಲಿಗೆ ಬರುವ ಮೊದಲು ಹುಲ್ಲು ತಿಂದಿದ್ದರೂ ಪುನಃ ತಮ್ಮ ತೃಣಾಹಾರವನ್ನು ಜಗಿದು ತಿನ್ನಲಾರವು. ಮುಂದೆ ಕೆಲವು ಸಮಯ ಅವು ಬದುಕಿರುತ್ತವೆ ಎಂದು ಹೇಳಲೂ ಸಾಧ್ಯವಿಲ್ಲ. ಬಹಳ ಮುದಿಯಾದ ಆ ಹಸುಗಳು ಪುನಃ ಕರು ಹಾಕಲಾರವು. ಆದುದರಿಂದ ಅವುಗಳಿಂದ ಮುಂದೆ ಹಾಲು ಸಿಗುವ ಭರವಸೆಯೂ ಇರಲಿಲ್ಲ. ಕೆಲವು ಹಸುಗಳಂತೂ ಬಹಳ ದುರ್ಬಲವಾಗಿದ್ದವು. ಅವುಗಳಲ್ಲಿ ಯಾವ ಇಂದ್ರಿಯ ಸಾಮರ್ಥ್ಯವೂ ಇರಲಿಲ್ಲ. ಇಂತಹ ಹಸುಗಳನ್ನು ದಾನವಾಗಿ ಕೊಟ್ಟವನು ಅನಂದಾ ಎಂಬ ಹೆಸರಿನ ಲೋಕಕ್ಕೆ ಹೋಗುತ್ತಾನೆ. ಅಲ್ಲಿ ಯಾವ ವಿಧವಾದ ಸುಖಕ್ಕೂ ಅವಕಾಶವಿಲ್ಲ.

**ಸ ಹೋವಾಚ ಪಿತರಂ ತತ ಕಸ್ಮೈ ಮಾಂ ದಾಸ್ಯಸೀತಿ ದ್ವಿತೀಯಂ,**
**ತೃತೀಯಂ ತಂ ಹೋವಾಚ ಮೃತ್ಯವೇ ತ್ವಾ ದದಾನೀತಿ ॥ 3 ॥**

**ಉಕ್ತಿಪ್ರಕಾರಮೇವಾಹ – ತತೇತಿ । ಹೇ ತತ = ತಾತ ಮಾಂ ಕಸ್ಮೈ ದಾಸ್ಯಸೀತಿ । ಮಾಂ ದತ್ವಾಪಿ ಸರ್ವಸ್ವದಕ್ಷಿಣಾಪ್ರತಿಜ್ಞಾ ಪೂರಯಿತವ್ಯಾ । ನೇತಾದೃಶೀರ್ಗಾ ದೇಹೀತಿ ತದ್ವಚನಾಭಿಪ್ರಾಯೋ ಜ್ಞೇಯಃ । ದ್ವಿತೀಯಂ ತೃತೀಯಮಿತಿ । ಏವಂ ಪ್ರಕಾರೇಣ ದ್ವಿತೀಯವಾರಂ ತೃತೀಯವಾರಂ ಚೋವಾಚೇತ್ಯರ್ಥಃ । ಮಾಂ ಕಸ್ಮೈ ದಾಸ್ಯಸೀತಿ ಪುತ್ರೇಣ ತ್ರಿವಾರಮುಕ್ತೇ ಸತಿ ಕುಪಿತಃ ಪಿತಾ ತಂ ಪುತ್ರ-ಮುವಾಚ । ಹೇತ್ಯಾಶ್ಚರ್ಯೇ । ತ್ವಾ ತ್ವಾಂ ಮೃತ್ಯವೇ ಯಮಾಯ ದದಾನೀತ್ಯುವಾಚ । ಮ್ರಿಯಸ್ವೇತಿ ಶಶಾಪೇತ್ಯರ್ಥಃ ।**

ಹೀಗೆ ಬಾಲ್ಯದಲ್ಲಿಯೇ ದೊಡ್ಡವರಿಗೂ ಉಂಟಾಗದಿರುವ ಶ್ರದ್ಧೆಯು ಬಾಲಕನಾದ ನಚಿಕೇತನಿಗೆ ಉಂಟಾಯಿತು. ಅವನು ತನ್ನ ತಂದೆಯನ್ನು ಕರೆದು ಹೀಗೆಂದನು.

"ಅಪ್ಪಾ ! ಇಂತಹ ಹಸುಗಳನ್ನು ದಾನ ಮಾಡುತ್ತಿರುವುದು ಸರಿಯಲ್ಲ. ನನ್ನನ್ನು ದಾನಮಾಡಿಯಾದರೂ ಸರ್ವಸ್ವದಕ್ಷಿಣೆಯ ಪ್ರತಿಜ್ಞೆಯನ್ನು ಪೂರೈಸಿಕೋ. ಇಂತಹ ಗೋವುಗಳನ್ನು ದಾನವಾಗಿ ಕೊಡಬೇಡ."

"ಬಾಲಕನ ಮಾತು. ಇದನ್ನು ಗಮನಿಸಬಾರದು ? ಎಂದು ತಂದೆಯಾದ ಉದ್ದಾಲಕನು ಸುಮ್ಮನಿದ್ದನು. ಆಗ ನಚಿಕೇತನು ತನ್ನ ತಂದೆಯನ್ನು ನೋಡಿ ಎರಡನೆಯ ಬಾರಿಯೂ ಹಾಗೆಯೇ ಹೇಳಿದನು. ಆಗಲೂ ಸುಮ್ಮನಿರುವ ತಂದೆಯನ್ನು ನೋಡಿ ಮೂರನೆಯ ಬಾರಿಯೂ "ಅಪ್ಪಾ ! ನನ್ನನ್ನು ಯಾರಿಗೆ ದಾನ ಮಾಡಬೇಕೆಂದಿರುವೆ " ಎಂದು ಕೇಳಿದನು. ಹೀಗೆ ಮತ್ತು ಮತ್ತು ಕೇಳುತ್ತಿರುವ ಮಗನನ್ನು ತಂದೆಯು ಕೆಂಪಾದ ಕಣ್ಣುಗಳಿಂದ ನೋಡಿದನು.

'ನಚಿಕೇತ ! ನಿನ್ನನ್ನು ಯಮನಿಗೆ ಕೊಡುತ್ತೇನೆ. ನೀನು ಈ ಕ್ಷಣದಲ್ಲಿಯೇ ಸತ್ತುಹೋಗು' ? ಎಂದು ಶಪಿಸಿದನು. ತಂದೆಯೇ ಮಗನಿಗೆ ಈ ರೀತಿಯಾಗಿ ಶಾಪ ಕೊಡುವುದು ಆಶ್ಚರ್ಯಕರವಾದ ವಿಷಯವಲ್ಲವೇ ? ಆದರೆ ಭಗವಂತನ ಇಚ್ಛೆಯನ್ನು ಮೀರಲು ಯಾರಿಗೆ ತಾನೇ ಸಾಧ್ಯ ? ವಿಧೇಯನಾದ ಮಗನು ತಂದೆಯ ಶಾಪವನ್ನು ಶಿರಸಾ ವಹಿಸಿದನು. ಹಿರಿಯರ ಶಾಪವನ್ನು ಅನುಗ್ರಹವೆಂದೇ ತಿಳಿದನು.

**ಪಿತ್ರಾ ಶಪ್ತಶ್ಚ ಪುತ್ರಃ ಶಾಪಮಂಗೀಕೃತವಾನ್ ಇತ್ಯಾಹ- ಬಹೂನಾಮಿತಿ ॥**

**ಬಹೂನಾಮೇಮಿ ಪ್ರಥಮಃ ಬಹೂನಾಮೇಮಿ ಮಧ್ಯಮಃ ।**
**ಕಿಂಸ್ವಿದ್ಯಮಸ್ಯ ಕರ್ತವ್ಯಂ ಯನ್ಮಯಾದ್ಯ ಕರಿಷ್ಯತಿ ॥ 4 ॥**

**ಬಹೂನಾಂ ಮರಿಷ್ಯಮಾಣಾನಾಂ ಮಧ್ಯೇ ಅಹಂ ಪ್ರಥಮಃ ಸನ್‌ಯಮಮೇಮಿ ಯಾಮಿ । ಬಹೂನಾಂ ಮೃತಾನಾಂ ಮಧ್ಯೇ ಮಧ್ಯಮಸ್ಸನ್ ವಾ ಯಮವೇಮಿ । ತದಾ ಯಮಸ್ಯ ಮಯಾ ಕಿಂಸ್ವಿತ್ ಕಿಂ ವಾ ಕರ್ತವ್ಯಂ ಸ್ಯಾತ್ । ಯನ್ಮಯಾದ್ಯ ಕರಿಷ್ಯತಿ ತತ್ ಕಿಮಸ್ತಿ ? ನ ಕಿಮಪಿ ॥ 4 ॥**

ನಚಿಕೇತನು ಹೇಳುತ್ತಾನೆ. "ಅಪ್ಪಾ, ನನ್ನ ನಂತರವೂ ಅನೇಕರು ಸಾಯಲಿದ್ದಾರೆ. ಅವರಿಗೆ ನಾನು ಮೊದಲನೆ-ಯವನಾಗುತ್ತೇನೆ, ನನಗಿಂತ ಮೊದಲು ಸತ್ತು ಯಮನ ಬಳಿಗೆ ಹೋದವರ ಹಿಂಭಾಗದಲ್ಲಿ ನಾನು ಹೋಗುವಾಗ, ಹಿಂದೆ ಸತ್ತವರು ಮುಂದೆ, ಹೋಗುತ್ತಿರುತ್ತಾರೆ. ನನ್ನ ಅನಂತರ ಸಾಯುವವರು ಹಿಂದೆ ಬರುತ್ತಿರುತ್ತಾರೆ. ಅವರ ಮಧ್ಯದಲ್ಲಿ ನಾನು ಹೋಗುತ್ತಿರುವಾಗ ನನಗೆ ಮರಣಭಯವೇತರದು ? ಹತ್ತರ ಸಾವು (ಹತ್ತು ಮಂದಿಯ ಜತೆಗೆ ಸಾಯುವುದು) ಮದುವೆಗೆ ಸಮಾನ ಎಂಬ ಗಾದೆಯಿಲ್ಲವೇ ? ನಾನು ಒಬ್ಬಂಟಿಗನೇ ಸಾಯಬೇಕಾಗಿಲ್ಲವಲ್ಲ. ಆದರೆ ಇಲ್ಲಿ ಒಂದು ಸಂದೇಹ ಮಾತ್ರ ಉಂಟಾಗುತ್ತಿದೆ. ಯಮನಿಗೆ ನನ್ನನ್ನು ದಾನವಾಗಿ ತೆಗೆದುಕೊಳ್ಳುವ ಬಯಕೆ ಇದೆಯೇ ? ಅವನಿಗೆ ನನ್ನಿಂದ ಆಗಬೇಕಾದ ಪ್ರಯೋಜನವೇನು ? ಅಪರೋಕ್ಷಜ್ಞಾನಿಯಾಗಿ ಪೂರ್ಣಕಾಮನಾದ ಯಮಧರ್ಮರಾಜನಿಗೆ ನನ್ನನ್ನು ಏತಕ್ಕೆ ದಾನವಾಗಿ ಕೊಡುತ್ತಿದ್ದೀ ಎಂಬುದು ನನಗೆ ಅರ್ಥವಾಗಲಿಲ್ಲ."

**ತಥಾಪಿ ಚೇದ್ ಗಚ್ಛೇತಿ ಬ್ರೂಷೇ ಗಚ್ಛಾಮ್ಯೇವ । ಸಿದ್ಧಸ್ಯ ಮರಣಸ್ಯ ತ್ವಯಾ ದತ್ತತ್ವಾತ್ ನ ತೇನ ಮಮ ಕ್ಲೇಶ ಇತ್ಯಾಹ 'ಅನುಪಶ್ಯೇತಿ' ।**

**ಅನುಪಶ್ಯ ಯಥಾ ಪೂರ್ವೇ ಪ್ರತಿಪಶ್ಯ ತಥಾಽಪರೇ ।**
**ಸಸ್ಯಮಿವ ಮರ್ತ್ಯಃ ಪಚ್ಯತೇ ಸಸ್ಯಮಿವ ಜಾಯತೇ ಪುನಃ ॥ 5 ॥**

**ಪೂರ್ವೇ ಯಥಾ ಮೃತಾಃ ತಾನ್ ಅನುಪಶ್ಯ ದೃಷ್ಟ್ವಾ ತಥಾ ಅಪರೇ ಚ ಮರಿಷ್ಯಂತೀತಿ ಪ್ರತಿಪಶ್ಯ ಕ್ಲೇಶಂ ಹಿತ್ವೈವ ಯಮಮೇಮೀತಿ ಪೂರ್ವೇಣಾನ್ವಯಃ । ದೇಹಿ ನೋ ಮೃತಿರ್ನಿಯತೇ- ತ್ಯೇತದ್ ದೃಷ್ಟಾಂತೇನ ವ್ಯನಕ್ತಿ ಸಸ್ಯಮಿವೇತಿ । ಸಸ್ಯಂ ಯಥಾ ಕಾಲೇನ ಪಚ್ಯತೇ ತಥಾ ಮರ್ತ್ಯಃ ಮನುಷ್ಯೋಽಪಿ ಪಚ್ಯತೇ । ಪಕ್ವಸಸ್ಯಮಿವ ಮ್ರಿಯತೇ । ಯಮಶಾಸನಾನುಭವಾನಂತರಂ ಸಸ್ಯಮಿವ ಪುನರ್ಜಾಯತೇ । ಮರ್ತ್ಯ ಇತ್ಯನುಷಂಗಃ । ಯತೋ ಜಂತೋರ್ಜನ್ಮಮೃತೀ ನಿಯತೇ ತತೋ ನಿಯತಮೃತೇರೇವ ತ್ವಯಾ ದತ್ತತ್ವಾತ್ ನ ಮಮ ತತಃ ಕ್ಲೇಶ ಇತಿ ಭಾವಃ ।। 5 ।।**

ನಚಿಕೇತನು ಮತ್ತೂ ಮುಂದುವರಿಸುತ್ತಾನೆ. "ಹೀಗಿದ್ದರೂ ನಾನು ಯಮಪುರಕ್ಕೆ ಹೋಗಲೇಬೇಕೆಂದು ಹೇಳುವುದಾದರೆ ಸಿದ್ಧನಾಗಿಯೇ ಇದ್ದೇನೆ. ಹುಟ್ಟಿದವನಿಗೆ ಎಂದಾದರೂ ಸಾವು ತಪ್ಪದು. ಸಿದ್ಧವಾದ ಮರಣವನ್ನೇ ನೀನು ಅನುಗ್ರಹಿಸಿದ್ದೀ. ಮರಣದಿಂದ ನನಗೇನೂ ಕ್ಲೇಶವಿಲ್ಲ. ನನ್ನ ಹಾಗೆಯೇ ಅನಂತ ಮಾನವರು ಸತ್ತಿಲ್ಲವೇ ? ನನ್ನ ಅನಂತರವೂ ಅಸಂಖ್ಯ ಮಾನವರು ಸಾಯುವುದಿಲ್ಲವೇ ? ಈ ವಿಷಯವನ್ನು ವಿಮರ್ಶಿಸಿದಾಗ ಮರಣವೆಂದರೆ ನನಗೆ ಸ್ವಲ್ಪವೂ ಭಯವಾಗುವುದಿಲ್ಲ. ಅಪ್ಪಾ ! ಹುಟ್ಟಿದವರಿಗೆ ಮರಣವು ನಿಯತವೆಂಬ ವಿಷಯವನ್ನು ಎಲ್ಲರೂ ಸುಲಭವಾಗಿ ತಿಳಿಯಬಹುದು. ಭತ್ತ, ಗೋ ಮುಂತಾದ ಸಸ್ಯಗಳು ಬೀಜ ಬಿತ್ತಿದಾಗ ಹುಟ್ಟುತ್ತವೆ. ಅನಂತರ ಬೆಳೆದು ಫಲಿಸುತ್ತವೆ. ಪಕ್ವವಾಗಿ ನಾಶವಾಗುತ್ತವೆ. ಅದರಂತಯೇ ಮನುಷ್ಯನು ಬೆಳೆದು ದೊಡ್ಡವನಾಗಿ ಸಾಯುತ್ತಾನೆ. ಧಾನ್ಯಗಳು ಪುನಃ ಬಿತ್ತಿದಾಗ ಹುಟ್ಟುವಂತೆ ಜೀವನೂ ಯಮಶಾಸನವನ್ನು ಅನುಭವಿಸಿ ಪುನಃ ಭೂಲೋಕದಲ್ಲಿ ಹುಟ್ಟುತ್ತಾನೆ. ಹೀಗೆ ಎಲ್ಲಾ ಪ್ರಾಣಿಗಳಿಗೂ ಜನನಮರಣಗಳು ನಿಯತವಾಗಿವೆ. ಹೀಗೆ ನಿಯತವಾದ ಮರಣವನ್ನೇ ನೀನು ಕೊಟ್ಟಿರುವುದರಿಂದ ನನಗೆ ಮನಃಕ್ಲೇಶವು ಎಳ್ಳಷ್ಟೂ ಉಂಟಾಗಿಲ್ಲ.

**ಅಥ ಯಮಲೋಕಂ ಗತೋ ನಚಿಕೇತಾಃ । ತದಾ ಯಮಃ ಅನ್ಯಲೋಕಂ ಗತ್ವಾ ಸ್ಥಿತೋ- ಽಭೂತ್ । ಯಮಭಾರ್ಯಯಾ ಕೃತಾಂ ಅತಿಥಿಪೂಜಾಂ ಯಜಮಾನಾಭಾವಾನ್ನ ಗೃಹ್ಣಾಮೀತ್ಯುಕ್ತ್ವಾ ದಿನತ್ರಯಪರ್ಯಂತಮುಪವಾಸೇನ ತದ್‌ಗೃಹ ಏವ ಸ್ಥಿತವಾನ್ । ತತೋ ಯಮೇ ಚಾಗತೇ ಯಮಂ ಪ್ರತಿ ಭಾರ್ಯೋಕ್ತಿಪ್ರಕಾರಮಾಹ- ವೈಶ್ವಾನರ ಇತಿ ।**

ಇಷ್ಟು ಮಾತನ್ನು ಹೇಳಿ ನಚಿಕೇತನು ತನ್ನ ತಂದೆಯ ಅಪ್ಪಣೆಯಂತೆ ಯಮಲೋಕಕ್ಕೆ ಹೋದನು. ಆಗ ಯಮನು ಅಲ್ಲಿರಲಿಲ್ಲ. ಕಾರ್ಯಾಂತರದಿಂದ ಬೇರೆ ಲೋಕಕ್ಕೆ ಹೋಗಿದ್ದನು. ಅವನ ಧರ್ಮಪತ್ನಿಯಾದ ಶ್ಯಾಮಲಾದೇವಿಯು ಸತ್ಕಾರವನ್ನು ಸ್ವೀಕರಿಸಬೇಕೆಂದು ಪರಿಪರಿಯಿಂದ ಬೇಡಿಕೊಂಡರೂ "ಯಜಮಾನನಿಲ್ಲದಿರುವಾಗ ತಾನು ಯಾವ ಅತಿಥಿಸತ್ಕಾರವನ್ನೂ ಸ್ವೀಕರಿಸಲಾರೆನು" ಎಂದು ಹೇಳಿ ನಚಿಕೇತನು ಯಮನ ಅರಮನೆಯ ಬಾಗಿಲಿನಲ್ಲಿ ಮೂರು ದಿವಸ ಉಪವಾಸವಾಗಿ ಕುಳಿತನು. ನಾಲ್ಕನೆಯ ದಿನ ಯಮನು ಸಂಚಾರದಿಂದ ಹಿಂತಿರುಗಿ ಬಂದ ಕೂಡಲೇ ಶ್ಯಾಮಲಾದೇವಿಯು ಪತಿಯನ್ನು ಕುರಿತು ಹೀಗೆಂದಳು.

**ವೈಶ್ವಾನರಃ ಪ್ರವಿಶತ್ಯತಿಥಿರ್ಬ್ರಾಹ್ಮಣೋ ಗೃಹಾನ್ ।**
**ತಸ್ಯೈತಾಂ ಶಾಂತಿಂ ಕುರ್ವಂತಿ ಹರ ವೈವಸ್ವತೋದಕಮ್ ।। 6 ।।**

ಅತಿಥಿಃ ಬ್ರಾಹ್ಮಣೋ ವೈಶ್ವಾನರಃ ಸನ್ ಗೃಹಾನ್ ಪ್ರವಿಶತಿ । ಗೃಹೇಷು ಆಗ್ನಿಪ್ರವೇಶೋ ಯಥಾ ತಥಾ ಬ್ರಾಹ್ಮಣೋ ಬ್ರಹ್ಮಜ್ಞಾನೀ ಅತಿಥಿರೂಪೋ ಗೃಹಮಾಗತಃ ಅಸತ್ಕೃತಶ್ಚೇತ್ ದಹತ್ಯೇವೇತ್ಯರ್ಥಃ । ತಥಾ ಚೋಕ್ತಂ ಷಷ್ಠಸ್ಕಂಧೇ । 'ಅಗ್ನೇರಭ್ಯಾಗತೋ ಮೂರ್ತಿಃ' ಇತಿ । ತಸ್ಯ ಅಗ್ನೇರಿವ ಪ್ರವಿಷ್ಟಸ್ಯ ಅತಿಥೇರೇತಾಂ, 'ಸ ಇದ್ಭೋಜೋ ಯೋ ಗೃಹವೇ ದದಾತ್ಯನ್ನಕಾಮಾಯ ಚರತೇ ಕೃಶಾಯ' ಇತ್ಯಾದಿಷೂಕ್ತಾಂ ಶಾಂತಿಂ ಕುರ್ವಂತಿ ಮಹಾಂತೋ ಗೃಹಿಣಃ । ಅತೋ ಹೇತೋಃ । ವೈವಸ್ವತ ವಿವಸ್ವತಃ ಪುತ್ರ ಸೂರ್ಯಪುತ್ರ । ಉದಕಂ ಉದಕಾದ್ಯತಿಥಿಪೂಜಾಮ್ । ಅಸ್ಮೈ ಬ್ರಾಹ್ಮಣಾಯ ಹರ ಕುರ್ವಿತಿ ಭಾರ್ಯೋವಾಚ ಯಮಂ ಪ್ರತೀತ್ಯರ್ಥಃ ॥ 6 ॥

"ಸ್ವಾಮಿ, ಅತಿಥಿಯು ಬೆಂಕಿಯಂತೆ ಮನೆಯನ್ನು ಪ್ರವೇಶಿಸುತ್ತಾನೆ. ಮನೆಗೆ ಬೆಂಕಿ ಬಿದ್ದಾಗ ಅದನ್ನು ಆರಿಸುವ ಉಪಾಯ ಮಾಡದಿದ್ದರೆ ಅದು ಹೇಗೆ ಮನೆಯನ್ನು ಸುಟ್ಟುಬಿಡುತ್ತದೋ ಅದರಂತೆಯೇ ಬ್ರಹ್ಮಜ್ಞಾನಿಯಾದ ಬ್ರಾಹ್ಮಣನು ಅತಿಥಿಯಾಗಿ ಮನೆಗೆ ಬಂದಾಗ ಅವನನ್ನು ಸತ್ಕರಿಸದಿದ್ದರೆ ಕುಲವನ್ನೇ ಸುಟ್ಟುಬಿಡುತ್ತಾನೆ. ಆದುದರಿಂದ ಅಗ್ನಿಯಂತೆ ಮನೆಯನ್ನು ಪ್ರವೇಶಿಸಿರುವ ಅತಿಥಿಗೆ ಶಾಸ್ತ್ರೋಕ್ತವಾದ ಪೂಜೆಯನ್ನು ಮಾಡಲು ಇಹಪರ ಸಾಧನಗಳನ್ನು ಜ್ಞಾನಿಗಳಾದ ಗೃಹಸ್ಥರು ಮಾಡಿಕೊಳ್ಳುತ್ತಾರೆ ಆದುದರಿಂದ ಎಲೈ ಸೂರ್ಯಪುತ್ರರಾದ ಯಮಧರ್ಮರಾಜರೇ ! ಈ ಅತಿಥಿಗೆ ಅರ್ಘ್ಯ ಪಾದ್ಯ ಮುಂತಾದ ಪೂಜೆಯನ್ನು ಮಾಡಲು ನೀರನ್ನು ತೆಗೆದುಕೊಂಡು ಹೋಗಿರಿ."

ಅತಿಥಿಪೂಜಾಯಾಃ ಅಕೃತೌ ಅನಿಷ್ಟಮಾಹ- ಆಶೇತಿ ।

ಆಶಾಪ್ರತೀಕ್ಷೇ ಸಂಗತಂ ಸೂನೃತಾಂ
ಚೇಷ್ಟಾಪೂರ್ತೇ ಪುತ್ರಪಶೂಂಶ್ಚ ಸರ್ವಾನ್ ।
ಏತದ್‌ವೃಂಕ್ತೇ ಪುರುಷಸ್ಯಾಲ್ಪಮೇಧಸೋ
ಯಸ್ಯಾನಶ್ನನ್ ವಸತಿ ಬ್ರಾಹ್ಮಣೋ ಗೃಹೇ ॥ 7 ॥

ಆಶಾ ಚ ಪ್ರತೀಕ್ಷಾ ಚ ಆಶಾಪ್ರತೀಕ್ಷೇ । ಪ್ರಾಪ್ತವಸ್ತುವಿಷಯೇಚ್ಛಾ ಹಿ ಆಶಾ, ಅಪ್ರಾಪ್ತವಸ್ತು-ವಿಷಯೇಚ್ಛಾ ಪ್ರತೀಕ್ಷೇತಿ ಭಾವಃ । ಸಂಗತಂ ಸುಹೃತ್‌ಸಂಗತಿಮ್ । ಸೂನೃತಾಂ ಜನಕರ್ತೃಕ-ಸಾಧುವಾರ್ತಾಂ ಚ, ಇಷ್ಟಂ ಚ ಪೂರ್ತಂ ಚ ಇಷ್ಟಾಪೂರ್ತೇ । 'ಅನ್ಯೇಭ್ಯೋಽಪಿ ದೃಶ್ಯತೇ' ಇತಿ ದೀರ್ಘಃ । ಇಷ್ಟಂ ಯಜನಂ, ಪೂರ್ತಂ ತಟಾಕಾದಿ । ಪುತ್ರೇತಿ । ಪುತ್ರಾನ್ ಪಶೂಂಶ್ಚೇತ್ಯರ್ಥಃ । ಯಸ್ಯ ಗೃಹೇ ಬ್ರಾಹ್ಮಣೋ ಅನಶ್ನನ್ ವಸತಿ, ತಸ್ಯೇತಿ ಶೇಷಃ । ಅಲ್ಪಮೇಧಸಃ ಅಲ್ಪಬುದ್ಧೇಃ ತಸ್ಯ ಪುರುಷಸ್ಯ ಅಶಾ-ಪ್ರತೀಕ್ಷಾದಿಕಂ ಪೂರ್ವಾರ್ಧೋಕ್ತಂ ಸರ್ವಮೇತತ್ ಅನಶನೇನ ಬ್ರಾಹ್ಮಣಸ್ಯ ಗೃಹೇಽವಸ್ಥಾನಂ ಕರ್ತೃ, ವೃಂಕ್ತೇ, ವೃಜೀ ವರ್ಜನೇ ಶ್ನಮ್‌ವಿಕರಣಂ, ವರ್ಜಯತಿ ಸರ್ವಂ ನಾಶಯತೀತ್ಯರ್ಥಃ ॥ 7 ॥

“ಅತಿಥಿ ಪೂಜೆಯನ್ನು ಸರಿಯಾಗಿ ಮಾಡದಿದ್ದರೆ ಹಿಂದೆ ಪಡೆದಿರುವ ಇಹಪರ ಸಾಧನಸಂಪತ್ತುಗಳು ನಾಶವಾಗುತ್ತವೆ. ಹೊಂದಲು ಅಪೇಕ್ಷಿಸಿರುವ ವಸ್ತುಗಳು ಸಿಗುವುದಿಲ್ಲ, ಸಿಕ್ಕಿದರೂ ನಾಶವಾಗುತ್ತವೆ. ಉತ್ತಮ ಸ್ನೇಹಿತರ ಸಮಾಗಮವು ಆಗುವುದಿಲ್ಲ. ಜನರಿಂದ ಬರುವ ಸತ್ಕೀರ್ತಿಯೂ ನಾಶವಾಗುತ್ತದೆ. ಯಾವನ ಮನೆಯಲ್ಲಿ ಬ್ರಾಹ್ಮಣನು ಉಪವಾಸವಿರುತ್ತಾನೋ ಅಂತಹ ಅಲ್ಪಬುದ್ಧಿಯುಳ್ಳ ಮನುಷ್ಯನು ಯಾಗಗಳನ್ನು ಮಾಡದಿದ್ದರೂ, ಕೆರೆ-ಭಾವಿ ಕಾಲುವೆಗಳನ್ನೂ ತೋಡಿಸಿದ್ದರೂ, ಅದರಿಂದ ಉಂಟಾಗಿರುವ ಪುಣ್ಯವೆಲ್ಲವೂ ನಾಶವಾಗುತ್ತದೆ. ಅವನ ಮಕ್ಕಳು, ಗೋವು ಮುಂತಾದ ಪಶುಸಂಪತ್ತುಗಳು ಎಲ್ಲವೂ ನಾಶವಾಗುತ್ತವೆ. ಈ ವಿಷಯವನ್ನೆಲ್ಲಾ ನೀವು ತಿಳಿದೇ ಇದ್ದೀರಿ. ಆದರೂ ತಮಗೆ ನಾನು ವಿಜ್ಞಾಪಿಸಿಕೊಂಡಿದ್ದೇನೆ.

ಶ್ಯಾಮಲಾದೇವಿಯ ಮಾತನ್ನು ಕೇಳಿದ ಕೂಡಲೇ ಯಮನು ಜಲವನ್ನು ತರಿಸಿ ಅತಿಥಿಯಾದ ನಚಿಕೇತನಿಗೆ ಅರ್ಘ್ಯ ಮುಂತಾದ ಪೂಜೆಯನ್ನು ಮಾಡಿ ಹೀಗೆಂದನು.

**ಏವಂ ಭಾರ್ಯೋಕ್ತೇನ ಯಮೇನ ತಸ್ಮೈ ಅರ್ಘ್ಯಾದಿಪೂಜಾಂ ಕೃತ್ವಾ ನಚಿಕೇತಸಂ ಪ್ರತಿ ಉಕ್ತವಚನಪ್ರಕಾರಮಾಹ- ತಿಸ್ರ ಇತಿ ।**

**ತಿಸ್ರೋ ರಾತ್ರೀರ್ಯದವಾತ್ಸೀದ್ ಗೃಹೇ ಮೇ**
**ಅನಶ್ನನ್ ಬ್ರಹ್ಮನ್ ಅತಿಥಿರ್ನಮಸ್ಯಃ ।**
**ನಮಸ್ತೇಽಸ್ತು ಬ್ರಹ್ಮನ್ ಸ್ವಸ್ತಿ ಮೇಽಸ್ತು**
**ತಸ್ಮಾತ್ ಪ್ರತಿ ತ್ರೀನ್ ವರಾನ್ ವೃಣೀಷ್ವ॥ 8 ॥**

**ಹೇ ಬ್ರಹ್ಮನ್, ನಮಸ್ಯೋ ನಮನಯೋಗ್ಯೋ ಅತಿಥಿಃ ಭವಾನ್ ಅನಶ್ನನ್ ಅಭುಂಜಾನಃ ಸನ್ ಮೇ ಗೃಹೇ ತಿಸ್ರೋ ರಾತ್ರೀಃ ದಿನತ್ರಯಂ ಯತ್ ಅವಾತ್ಸೀತ್ ವಾಸಮಕಾರ್ಷಿತ್ ಇತಿ ಯತ್ ತಸ್ಮಾತ್ ಪ್ರತಿ ತಸ್ಯ ಪ್ರತೀಕಾರಾಯ ತ್ರೀನ್ ವರಾನ್ ವೃಣೀಷ್ವ । ವೃಜ ಸಂಭಕ್ತೌ, ಸಂಭಜಸ್ವ ಸ್ವೀಕುರು । ತೇ ತುಭ್ಯಂ ನಮೋಽಸ್ತು, ಬ್ರಹ್ಮನ್ ಮೇ ಮಹ್ಯಂ ಸ್ವಸ್ತಿ, ಅವ್ಯಯಮೇತತ್, ಮಂಗಲಮಸ್ತು । 'ನಮಃ ಸ್ವಸ್ತಿ' ಇತ್ಯಾದಿನಾ ಚತುರ್ಥೀ ।**

“ಎಲೈ ಬ್ರಾಹ್ಮಣಶ್ರೇಷ್ಠನೇ । ನೀನು ನಮಸ್ಕಾರಯೋಗ್ಯನಾದ ಉತ್ತಮ ಅತಿಥಿಯಾಗಿರುವೆ. ನಾನು ಮನೆಯಲ್ಲಿ ಇಲ್ಲದುದರಿಂದ ನೀನು ಆಹಾರಾದಿಗಳನ್ನು ಸ್ವೀಕರಿಸದೆ ಮೂರು ರಾತ್ರಿಗಳನ್ನು ನನ್ನ ಮನೆಯಲ್ಲಿ ಕಳೆಯಬೇಕಾಯಿತು. ಇದು ನನಗೆ ಬಹಳ ಅನಿಷ್ಟಕರವಾದುದು, ಮತ್ತು ದುಃಖಕರವೂ ಆಗಿದೆ. ಆದುದರಿಂದ ಈ ಅನಿಷ್ಟದ ಪರಿಹಾರಕ್ಕಾಗಿ ನಾನು ಮೂರು ವರಗಳನ್ನು ಕೊಡಬೇಕೆಂದು ನಿಶ್ಚಯಿಸಿದ್ದೇನೆ. ನನಗೆ ಮಂಗಳವುಂಟಾಗುವಂತೆ ಅನುಗ್ರಹಿಸು. ನಿನಗೆ ಕೈ ಮುಗಿದು ಕೇಳಿಕೊಳ್ಳುತ್ತೇನೆ. ನಿನಗೆ ಬೇಕಾದ ಮೂರು ವರಗಳನ್ನು ಕೇಳು.”

**ಏವಂ ಯಮೇನೋಕ್ತೋ ನಚಿಕೇತಾಃ ಪ್ರಥಮಂ ಏಕಂ ತಾವತ್ ವರಂ ವೃಣುತೇ ಇತ್ಯಾಹ ವೇದಪುರುಷಃ ಶಾಂತಸಂಕಲ್ಪ ಇತಿ ।**

**ಶಾಂತಸಂಕಲ್ಪಃ ಸುಮನಾ ಯಥಾ ಸ್ಯಾತ್**
**ವೀತಮನ್ಯುರ್ಗೌತಮೋ ಮಾಽಭಿಮೃತ್ಯೋ ।**
**ತ್ವತ್ಪ್ರಸೃಷ್ಟಂ ಮಾಽಭಿವದೇತ್ ಪ್ರತೀತಃ**
**ಏತತ್ತ್ರಯಾಣಾಂ ಪ್ರಥಮಂ ವರಂ ವೃಣೇ ॥ 9 ॥**

**ಹೇ ಮೃತ್ಯೋ ! ಗೌತಮೋ ಮಮ ಪಿತಾ ಶಾಂತಸಂಕಲ್ಪಃ ಮದನಿಷ್ಟೇ ಶಾಂತಃ ಸಂಕಲ್ಪಃ ಯಸ್ಯ ಸಃ ತಥಾ, ಸುಮನಾಃ ಶೋಭನಮನಸ್ಕಃ ಯಥಾ ಸ್ಯಾತ್, ಮಾಽಭಿ ಮಾಂ ಪ್ರತಿ ವೀತಮನ್ಯುಃ ಅಪಗತ-ಕೋಪಃ, ಯಥಾ ಸ್ಯಾದಿತಿ ಪ್ರತ್ಯೇಕಮನ್ವೇತಿ, ತ್ವತ್ಪ್ರಸೃಷ್ಟಂ ತ್ವಯಾ ಪ್ರೇಷಿತಂ ಮಾಽಭಿ ಮಾಂ ಪ್ರತಿ ಪ್ರತೀತಃ ಪ್ರತ್ಯಭಿಜ್ಞಾನವಾನ್ ಯಥಾ ವದೇತ್, ಏತತ್ ಏತಂ ವರಾಣಾಂ ಪ್ರಥಮಂ ವರಂ ವೃಣೇ ಇತ್ಯಾಹ ನಚಿಕೇತಾ ಯಮಂ ಪ್ರತೀತ್ಯರ್ಥಃ ॥ 9 ॥**

ನಚಿಕೇತನು ಯಮನ ಮಾತನ್ನು ಕೇಳಿದನು. ಶಾಂತಸ್ವಭಾವದ ಆ ಮುನಿಪುತ್ರನು ಅತಿಥೇಯನ (ಯಜಮಾನ) ಅನಿಷ್ಟವನ್ನು ಚಿಂತಿಸುವನೇ ? ಇಲ್ಲ ಆದರೂ ಯಮನು ಕೊಡುವ ಮೂರು ವರಗಳನ್ನು ನಿರಾಕರಿಸಬಾರದು. ಏಕೆಂದರೆ ಮಹಾಪುರುಷರ ಅನುಗ್ರಹವು ಉನ್ನತಿಯ ಸೋಪಾನವಾಗಿರುವುದರಿಂದ ಅದನ್ನು ಅವಶ್ಯವಾಗಿ ಸಂಪಾದಿಸಬೇಕು.'' ಹೀಗೆ ಯೋಚಿಸಿ ನಚಿಕೇತನು ಕೈಮುಗಿದು ಮೊದಲ ವರವನ್ನು ಹೀಗೆ ಕೇಳಿದನು.

''ಎಲೈ ಮಹಾನುಭಾವನಾದ ವೈವಸ್ವತನೇ ! ನನ್ನ ತಂದೆಯು ಯಥಾರ್ಥವಾದ ನನ್ನ ಮಾತಿನ ಅಭಿಪ್ರಾಯವನ್ನು ತಿಳಿಯದೆ ಕುಪಿತನಾಗಿ ನನಗೆ ಅನಿಷ್ಟವನ್ನುಂಟುಮಾಡಬೇಕೆಂದು ಸಂಕಲ್ಪಿಸಿ ನನಗೆ ಮರಣವುಂಟಾಗುವಂತೆ ಶಾಪವನ್ನು ಕೊಟ್ಟಿದ್ದಾನೆ. ನನ್ನನ್ನು ಪುನಃ ನೋಡದಂತೆ ಅಶಾಂತಿಯಿಂದ ಕುದಿಯುತ್ತಿರಬಹುದು. ನನ್ನನ್ನು ಪುನಃ ನೋಡಿದರೆ ಸಿಟ್ಟಿಗೇಳಬಹುದು. ಆದುದರಿಂದ ಮರಣನಿಯಾಮಕನಾದ ದೇವತೆಯೇ ನನ್ನ ತಂದೆಯ ಅನಿಷ್ಟ ಸಂಕಲ್ಪವು ನಾಶವಾಗಲಿ, ಅವನ ಮನಸ್ಸು ಪ್ರಸನ್ನವಾಗಲಿ. ನೀನು ನನ್ನನ್ನು ಪುನಃ ತಂದೆಯ ಬಳಿಗೆ ಕಳುಹಿಸುತ್ತಿಯಲ್ಲವೆ ? ಆಗ ಹಿಂತಿರುಗಿ ಬಂದ ನನ್ನನ್ನು ನನ್ನ ತಂದೆಯು ಗುರುತುಹಿಡಿದು ಪ್ರೀತಿಯಿಂದ ಕರೆದು ಮಾತನಾಡಿಸಲಿ. ನೀನು ಕೊಡುವೆನೆಂದಿರುವ ಮೂರು ವರಗಳಲ್ಲಿ ಇದೇ ನನಗೆ ಬೇಕಾಗಿರುವ ಮೊದಲನೆಯ ವರವು.

**ಇತ್ಯುಕ್ತೋ ಯಮೋ ವರಂ ತಥೈವ ದತ್ತವಾನ್ ಇತ್ಯಾಹ ಯಥೇತಿ ।**

**ಯಥಾ ಪುರಸ್ತಾದ್ ಭವಿತಾ ಪ್ರತೀತ**
**ಔದ್ದಾಲಕಿರಾರುಣಿರ್ಮತ್ಪ್ರಸೃಷ್ಟಃ ।**
**ಸುಖಂ ರಾತ್ರೀಃ ಶಯಿತಾ ವೀತಮನ್ಯುಃ**
**ತ್ವಾಂ ದದೃಶಿವಾನ್ ಮೃತ್ಯುಮುಖಾತ್ ಪ್ರಮುಕ್ತಮ್ ॥ 10 ॥**

ಔದ್ದಾಲಕಿಃ ಉದ್ದಾಲಕಸ್ಯಾಪತ್ಯಂ ಔದ್ದಾಲಕಿಃ ಅರುಣಾಯಾಃ ಅಪತ್ಯಂ ಆರುಣಿಃ, ಸ್ತ್ರೀಭ್ಯೋ ಢಗಿತಿ ನಾಶ್ರಿತಂ, ಭವಾನ್ಮತ್ಪ್ರಸೃಷ್ಟಃ ಮತ್ಪ್ರೇಷಿತಸ್ಸನ್ ಪುರಸ್ತಾತ್ ಗ್ರಾಮಾಂತರಾತ್ ಆಗತೋ ಯಥಾ ತಥಾ ಪ್ರತೀತಃ ಪಿತ್ರಾ ಪ್ರತ್ಯಭಿಜ್ಞಾತಃ ಭವಿತಾ ಭವಿಷ್ಯತಿ । ರಾತ್ರೀಃ ಸುಖಂ ಶಯಿತಾ ಶಯಾನೋ ಭವಿತಾ । ತವ ಪಿತಾ ವೀತಮನ್ಯುಸ್ಸನ್ ಮೃತ್ಯುಮುಖಾತ್ ಯಮಮುಖಾತ್ ಪ್ರಮುಕ್ತಂ ತ್ವಾಂ ದದೃಶಿ-ವಾನ್ ದೃಷ್ಟವಾನ್ ಭವೇದಿತಿ ಯಮಃ ಪ್ರಥಮಂ ವರಂ ದತ್ತವಾನ್ ಇತ್ಯರ್ಥಃ ॥ 10 ॥

ನಚಿಕೇತಕುಮಾರನ ಪಿತೃಭಕ್ತಿಯನ್ನು ನೋಡಿ ಯಮನು, ಆಶ್ಚರ್ಯಪಟ್ಟನು. ತನ್ನನ್ನು ಶಪಿಸಿದ ತಂದೆಗೆ ಯಾವ ಅನಿಷ್ಟವನ್ನೂ ಯೋಚಿಸದೆ ಅವನಿಗೆ ಸೌಮನಸ್ಯ (ಒಳ್ಳೆಯ ಮನಸ್ಸು) ಉಂಟಾಗಲೆಂದು ಪ್ರಾರ್ಥಿಸುತ್ತಿರುವ ಮುನಿಕುಮಾರನಿಗೆ ಯಮಧರ್ಮರಾಜನು ಅವನು ಬೇಡಿದ ಮೊದಲನೆಯ ವರವನ್ನು ಕೊಟ್ಟು ಹೀಗೆ ಹೇಳಿದನು.

"ಉದ್ದಾಲಕ ಮತ್ತು ಅರುಣಿಯರ ಪುತ್ರನಾದ ನಚಿಕೇತನೇ । ನಾನು ನಿನ್ನನ್ನು ನಿನ್ನ ತಂದೆಯ ಬಳಿಗೇ ತಿರುಗಿ ಕಳುಹಿಸುತ್ತೇನೆ. ಆಗ ಬೇರೊಂದು ಹಳ್ಳಿಗೆ ಹೋಗಿ ಹಿಂತಿರುಗಿ ಬರುವವನ್ನು ಹೇಗೆ ಗುರುತುಹಿಡಿದು ಮಾತನಾಡಿಸುತ್ತಾರೋ ಅದರಂತೆಯೇ ನಿನ್ನ ತಂದೆಯೂ ನಿನ್ನನ್ನು ಗುರುತಿಸಿ ಮಾತನಾಡಿಸುತ್ತಾನೆ, ಇವನು ಯಾವನೋ ಬೇರೆಯವನು. ಸತ್ತುಹೋದ ನನ್ನ ಮಗನ ಪಿಶಾಚವಿರಬಹುದು ಎಂದು ಮುಂತಾಗಿ ಸಂದೇಹಿಸುವುದಿಲ್ಲ. ನಿನಗೆ ಶಾಪಕೊಟ್ಟು ಇನ್ನೂ ಕೋಪ ಮತ್ತು ದುಃಖಗಳಿಂದ ರಾತ್ರಿಯಲ್ಲಿ ಅವನಿಗೆ ಸರಿಯಾಗಿ ನಿದ್ರೆಯೂ ಬರುತ್ತಿಲ್ಲ. ಆದರೆ ನಿನ್ನನ್ನು ನೋಡಿದ ನಂತರ ಆ ಕೋಪ-ದುಃಖಗಳು ಶಾಂತವಾಗಿ ಅವನು ರಾತ್ರಿಯಲ್ಲಿ ಸುಖವಾಗಿ ನಿದ್ರೆ ಮಾಡುತ್ತಾನೆ. ಮೃತ್ಯು ದೇವತೆಯಿಂದ ಬಿಡುಗಡೆ ಹೊಂದಿ ಬಂದಿರುವ ಪ್ರೀತಿಪಾತ್ರ ಪುತ್ರನ ಮುಖವನ್ನು ನೋಡಿ ಅವನು ಬಹಳ ಸಂತೋಷಪಡುತ್ತಾನೆ ಎಂದು ಹೇಳಿ ಎರಡನೆಯ ವರವನ್ನು ಕೇಳುವಂತೆ ಸೂಚಿಸಿದನು.

ಸ್ವರ್ಗ್ಯಾಗ್ನಿಸ್ವರೂಪಜ್ಞಾನಲಕ್ಷಣಂ ದ್ವಿತೀಯಂ ವರಂ ಯಾಚಿತುಂ ತದ್ಯಾಂಚಾಯಾಂ ಹೇತುತಯಾ ಸ್ವರ್ಗ್ಯಾಗ್ನಿಜ್ಞಾನಫಲಸ್ವರ್ಗಶಬ್ದಿತವಿಷ್ಣುಲೋಕಸ್ವರೂಪಮಾಹ ಸ್ವರ್ಗ ಇತಿ ।

ಸ್ವರ್ಗೇ ಲೋಕೇ ನ ಭಯಂ ಕಿಂಚ ನಾಸ್ತಿ
ನ ತತ್ರ ತ್ವಂ ನ ಜರಯಾ ಬಿಭೇತಿ ।
ಉಭೇ ತೀರ್ತ್ವಾ ಅಶನಾಯಾಪಿಪಾಸೇ
ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥ 11 ॥

ಸ್ವರ್ಗೇ ಲೋಕೇ ಸ್ವರ್ಗಶಬ್ದಿತೇ ಭಗವಲ್ಲೋಕೇ ಕಿಂಚನ ಕಿಮಪಿ ಭಯಂ ನಾಸ್ತಿ । ತತ್ರ ಲೋಕೇ ತ್ವಂ ಚ ನಾಸಿ, ಶಿಕ್ಷಕಸ್ಸನ್ನಿತಿ ಭಾವಃ । ನ ಜರಯಾ ಬಿಭೇತಿ, ತಲ್ಲೋಕಂ ಗತಃ ಇತಿ ಯೋಜ್ಯಮ್ । ಅಶನಾಯಾಪಿಪಾಸೇ ಉಭೇ ತೀರ್ತ್ವಾ ಶೋಕಾತಿಗೋ ಶೋಕಾನತಿಕ್ರಾಂತಸ್ಸನ್ ಮೋದತೇ ಸುಖ-ಮನುಭವತಿ । ಸ್ವರ್ಗಲೋಕ ಇತಿ ಪುನರುಕ್ತಿರಾದರಾರ್ಥಾ । ಯದ್ವಾ ನಾಯಂ ಲೋಕಃ ವಿಷ್ಣುಲೋಕಃ

**ಕಿಂತು ಪ್ರಸಿದ್ಧಸ್ವರ್ಗಲೋಕ ಏವೇತಿ ಜ್ಞಾಪನಾಯ ಪುನರುಕ್ತಿಃ । 'ಪ್ರಾಪ್ಯ ಸ್ವರ್ಗಂ ತತ್ರ ಭಯಾತಿಗಃ । ಉಷ್ಯ ಮನ್ವಂತರಂ ಕಾಲಮಿ'ತ್ಯಾದಿಭಾಷ್ಯೋಕ್ತೇಃ ॥ 11 ॥**

ಕುಮಾರ ನಚಿಕೇತನು ಎರಡನೆಯ ವರವನ್ನು ಹೀಗೆ ಕೇಳಬೇಕೆಂದು ಆಳವಾಗಿ ಆಲೋಚಿಸಿದನು. ಸ್ವರ್ಗಾಗ್ನಿಯ ವಿಷಯವನ್ನು ಅವನು ಜ್ಞಾನಿಗಳ ಬಾಯಿಂದ ಹಿಂದೆ ಕೇಳಿದ್ದನು. ಈಗ ಆ ಅಗ್ನಿಯ ಸ್ವರೂಪವನ್ನು ಜ್ಞಾನಿಶ್ರೇಷ್ಠನಾದ ಯಮದೇವನಿಂದ ಸರಿಯಾಗಿ ತಿಳಿಯಬೇಕೆಂದು ಕುತೂಹಲ ಅವನಲ್ಲಿ ಜಾಗೃತವಾಯಿತು. ಅವನು ತನಗೆ ತಿಳಿದಿರುವಷ್ಟು ಮಟ್ಟಿಗೆ ಆ ಅಗ್ನಿಯ ಸ್ವರೂಪ ಮುಂತಾದ್ದನ್ನು ವರ್ಣಿಸುತ್ತಾ ತನಗೆ ಯಥಾವತ್ತಾಗಿ ಆ ಅಗ್ನಿಯ ವಿಷಯವನ್ನು ತಿಳಿಸಬೇಕೆಂದು ಯಮಧರ್ಮನನ್ನು ಪ್ರಾರ್ಥಿಸುತ್ತಾ ಹೀಗೆ ಹೇಳಿದನು.

"ಅಯ್ಯಾ, ಯಮಧರ್ಮರಾಜನೇ ! ಸ್ವರ್ಗಲೋಕದಲ್ಲಿ ಯಾವ ಭಯವೂ ಇಲ್ಲವಂತೆ. ಯಾವ ಭಯವೂ ಇಲ್ಲದ ಲೋಕವು ಶ್ರೀಮನ್ನಾರಾಯಣನ ವೈಕುಂಠಲೋಕವೇ ಆಗಿರಬೇಕಷ್ಟೇ ? ಅಲ್ಲಿ ನಿನ್ನ ಆಧಿಪತ್ಯವೂ ಇಲ್ಲವಂತೆ ಅಲ್ಲಿಗೆ ತೆರಳಿದ ಜೀವಚೇತನನಿಗೆ ಮುಪ್ಪಿನ ಭಯವಿಲ್ಲವಂತೆ. ಅಲ್ಲಿ ಹಸಿವು ಬಾಯಾರಿಕೆಗಳೂ ಇಲ್ಲವಂತೆ. ಅಲ್ಲಿಗೇ ಹೋದ ಚೇತನನು ಯಾವ ಶೋಕವನ್ನೂ ಅನುಭವಿಸುವುದಿಲ್ಲ. ಕೇವಲ ಆನಂದವನ್ನೇ ಅನುಭವಿಸುತ್ತಾನಂತೆ. ಇಂತಹ ಲೋಕವನ್ನು ಹೊಂದುವುದಕ್ಕೆ ಯಾವ ಅಗ್ನಿಯನ್ನು ಪೂಜಿಸಬೇಕೆಂದು ನನಗೆ ದಯಮಾಡಿ ಉಪದೇಶಿಸಬೇಕು."

**ಏವಂ ಸ್ವರ್ಗ್ಯಾಗ್ನಿಜ್ಞಾನಫಲಂ ನಿರೂಪ್ಯ ಸ್ವರ್ಗ್ಯಾಗ್ನಿಂ ಪೃಚ್ಛತಿ- ಸ ತ್ವಮಿತಿ ।**

**ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ**
**ಪ್ರಬ್ರೂಹಿ ತಂ ಶ್ರದ್ಧಧಾನಾಯ ಮಹ್ಯಮ್ ।**
**ಸ್ವರ್ಗಲೋಕಾ ಅಮೃತತ್ವಂ ಭಜಂತೇ**
**ಏತತ್ ದ್ವಿತೀಯೇನ ವೃಣೇ ವರೇಣ ॥ 12 ॥**

**ಹೇ ಮೃತ್ಯೋ ! ಸ ತ್ವಂ ಸ್ವರ್ಗ್ಯಂ ಉಕ್ತರೂಪಸ್ವರ್ಗಸಾಧನಂ ಅಗ್ನಿಂ ಅಗ್ನಿಶಬ್ದಿತೇಷ್ಟಕಾಚಿತಿಸ್ಥಮಗ್ರ್ಯ-ತ್ವಾದಿಗುಣಯುಕ್ತತಯಾ ಅಗ್ನಿನಾಮಕಂ ಹರಿಂ ಅಧ್ಯೇಷಿ ಜಾನಾಸಿ । ತಂ ಚಿತಿಸ್ಥಮಗ್ನಿನಾಮಕಂ ಹರಿಂ ಶ್ರದ್ದಧಾನಾಯ ಮಹ್ಯಂ ಬ್ರೂಹಿ । ಕುತಃ । ನ ಹಿ ಸ್ವರ್ಗ್ಯತ್ವಮಾತ್ರೇಣಂ ತದ್ವಚನಮಾವಶ್ಯಕಮಿತ್ಯತ ಆಹ ಸ್ವರ್ಗೇತಿ । ಸ್ವರ್ಗೋ ಲೋಕೋ ಯೇಷಾಂ ತೇ ತಥೋಕ್ತಾಃ । ಮನ್ವಂತರಂ ಸ್ವರ್ಗಲೋಕೇ ಸ್ಥಾಸ್ಯಂತಃ ಪಶ್ಚಾದಮೃತತ್ವಂ ಮುಕ್ತಿಂ ಭಜಂತೇ ಪ್ರಾಪ್ನುವಂತಿ । ಏತತ್ ಏತಂ ದ್ವಿತೀಯೇನ ವರೇಣ ದ್ವಿತೀಯಂ ವರಂ ವೃಣ ಇತ್ಯರ್ಥಃ ॥ 12 ॥**

ಕೆಲವು ಜೀವಚೇತನರು ಅಗ್ನಿಯನ್ನು ಪೂಜಿಸಿ ಇಂದ್ರದೇವನ ಲೋಕಕ್ಕೆ ಹೋಗಿ ಅಲ್ಲಿ ಯಾವ ಭಯವೂ ಇಲ್ಲದೆ ಒಂದು ಮನ್ವಂತರಕಾಲ★ ವಾಸಿಸುತ್ತಾರಂತೆ, ಅನಂತರ ಅಲ್ಲಿಂದ ವಿಷ್ಣುಲೋಕಕ್ಕೆ ಹೋಗಬಹುದಂತೆ. ಎಲ್ಲೈ

★ 159 ಕೋಟಿ 52 ಲಕ್ಷ ಮಾನವದಿನಗಳಿಗೆ ಒಂದು ದೇವತೆಗಳ ಯುಗ. ಇಂತಹ 71 ಯುಗಗಳಿಗೆ 1 ಮನ್ವಂತರ, ಮನ್ವಂತರಂ ತು ದಿವ್ಯಾನಾಂ ಯುಗಾನಾಮೇಕಸಪ್ತತಿಃ (ಅಮರ- ಕಾಲವರ್ಗ).

ಯಮದೇವನೇ, ವೈಕುಂಠಲೋಕ ಮತ್ತು ಸ್ವರ್ಗಲೋಕಗಳನ್ನು ಕೊಡುವ ಆ ಅಗ್ನಿ ಎಂಬ ಹೆಸರಿನ ನಾರಾಯಣನು ಇಟ್ಟಿಗೆಗಳಿಂದ ಮಾಡಿದ ಯಜ್ಞಕುಂಡದಲ್ಲಿ ಸನ್ನಿಧಾನವನ್ನಿಟ್ಟಿರುತ್ತಾನೆಂದೂ, ಅತ್ಯಂತ ಶ್ರೇಷ್ಠನಾಗಿರುತ್ತಾನೆಂದೂ, ಅತ್ಯಂತ ಶ್ರೇಷ್ಠನಾಗಿರುವುದರಿಂದ ಅವನಿಗೆ ಅಗ್ನಿ ಎಂದು ಹೆಸರು ಬಂದಿದೆಯೆಂದೂ ನಾನು ಕೇಳಿದ್ದೇನೆ ಅಂತಹ ಅಗ್ನಿಯನ್ನು ನೀನು ಸರಿಯಾಗಿ ತಿಳಿದಿದ್ದೀಯಲ್ಲವೇ ? ನಾನು ಬಹಳ ಶ್ರದ್ಧೆಯಿಂದ ಕೇಳುತ್ತಿದ್ದೇನೆ. ಕೇವಲ ಸ್ವರ್ಗವನ್ನು ಪಡೆಯುವ ಆಸೆಯಿಂದ ನಾನು ಆ ಅಗ್ನಿಯ ಸ್ವರೂಪವನ್ನು ತಿಳಿಯಲು ಅಪೇಕ್ಷಿಸುತ್ತಿಲ್ಲ. ಹಿಂದೆ ಹೇಳಿದಂತೆ ಆ ಅಗ್ನಿಯ ಪೂಜೆಯಿಂದ ಸ್ವರ್ಗವನ್ನು ಸಂಪಾದಿಸಿ ಕೆಲವು ಸಮಯ ಅಲ್ಲಿ ವಾಸಿಸಿ ಅನಂತರ ಮುಕ್ತಿಯನ್ನು ಪಡೆಯಬೇಕೆಂದು ನನ್ನ ಬಯಕೆ. ಈ ಅಗ್ನಿಯ ಪೂಜಾವಿಧಿಯನ್ನು ನನಗೆ ಉಪದೇಶಿಸು. ಇದೇ ನನಗೆ ಬೇಕಾಗಿರುವ ಎರಡನೆಯ ವರ.''

ಇತಿ ಯಾಚಿತೋ ಯಮಃ ಪ್ರತ್ಯುವಾಚೇತ್ಯಾಹ - ಪ್ರತೇ ಇತಿ ।

**ಪ್ರತೇ ಬ್ರಮೀಮಿ ತದು ಮೇ ನಿಬೋಧ**
**ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್ ।**
**ಅನಂತಲೋಕಾಪ್ತಿಮಥೋ ಪ್ರತಿಷ್ಠಾಂ**
**ವಿದ್ಧಿ ತ್ವಮೇತಂ ನಿಹಿತಂ ಗುಹಾಯಾಮ್ ॥ 13 ॥**

ಹೇ ನಚಿಕೇತಃ, ಸ್ವರ್ಗ್ಯಂ ಸ್ವರ್ಗಸಾಧನಂ ಅಗ್ನಿಂ ಚಿತಿಸ್ಥಂ ಅಗ್ನಿನಾಮಕಂ ಹರಿಂ ಪ್ರಜಾನನ್ ಅಹಂ ತೇ ತುಭ್ಯಂ ಪ್ರಬ್ರವೀಮಿ ಪ್ರವಚ್ಮಿ । ತದು ತದೇವ ತ್ವಯಾ ಪೃಷ್ಟಂ ಮಯಾ ಉಚ್ಯಮಾನಂ ಅಗ್ನಿನಾಮಕಂ ಚಿತಿಸ್ಥಹರಿಸ್ವರೂಪಮೇವ ಮೇ ಮತ್ಸಕಾಶಾತ್ ನಿಬೋಧ ನಿಬುಧ್ಯಸ್ವ ಜಾನೀಹಿ, ಪ್ರತಿಜ್ಞಾತಂ ಸ್ವರ್ಗ್ಯಾಗ್ನಿಸ್ವರೂಪಮುಕ್ತವಾನಿತ್ಯಾಹ- ಅನಂತೇತಿ । ಅನಂತಲೋಕಾಪ್ತಿಂ ಅನಂತಸ್ಯ ವಿಷ್ಣೋರ್ಲೋಕಸ್ಯ ಆಪ್ತಿ ಆಪ್ತಿಸಾಧನಂ, ಅಥೋ ಕಿಂಚ, ಪ್ರತಿಷ್ಠಾಂ ಸರ್ವಲೋಕಪ್ರತಿಷ್ಠಾಹೇತುಮ್, ಗುಹಾಯಾಂ ಸರ್ವಪ್ರಾಣಿಹೃದಯಗುಹಾಯಾಂ ನಿಹಿತಂ ನಿತರಾಂ ಸ್ಥಿತಮ್ । ಸರ್ವಲೋಕಾನಾಂ ಆದಿಂ ಕಾರಣಭೂತಂ, ತಂ ಏತಂ ಅಗ್ನಿಂ ಚಿತಿಸ್ಥಂ ಅಗ್ನಿನಾಮಕಂ ಹರಿಂ ತ್ವಂ ವಿದ್ಧಿ ಜಾನೀಹಿ ಇತ್ಯುವಾಚ ಯಮಃ ॥ 13 ॥

ತಸ್ಮೈ ನಚಿಕೇತಸೇ ಅನ್ಯದಪಿ ಉಕ್ತವಾನಿತ್ಯಾಹ- ಯಾ ಇಷ್ಟಕಾ ಇತಿ ॥

**ಲೋಕಾದಿಮಗ್ನಿಂ ತಮುವಾಚ ತಸ್ಮೈ**
**ಯಾ ಇಷ್ಟಕಾ ಯಾವತೀರ್ವಾ ಯಥಾ ವಾ ।**
**ಸ ಚಾಪಿ ತತ್ ಪ್ರತ್ಯವದದ್ ಯಥೋಕ್ತಂ**
**ಅಥಾಸ್ಯ ಮೃತ್ಯುಃ ಪುನರಾಹ ತುಷ್ಟಃ ॥ 14 ॥**

ಯಾ ಇಷ್ಟಕಾದೇವತಾಃ ಯಾವತೀರ್ವಾ ಯಾವತ್‌ಸಂಖ್ಯಾಕಾಃ ಷಷ್ಟ್ಯುತ್ತರಶತತ್ರಯಸಂಖ್ಯಾಕಾಃ ಯಥಾ ವಾ ಯಾದೃಶಪರಿಮಾಣಾ ವಾ ತಾಃ ಉವಾಚೇತ್ಯನ್ವಯಃ । ಷಷ್ಟ್ಯುತ್ತರಶತತ್ರಯಸಂಖ್ಯಾ-

**ಕೇಷ್ಟಕಾದೇವತಾಂ ವಿಷ್ಣುಂ, ಇಷ್ಟಕಾಸಂಖ್ಯಾಂ, ಪರಿಮಾಣಂ ಚೋವಾಚೇತ್ಯರ್ಥಃ । ಇಷ್ಟಕಾದೇವ-ತಾಯಾಃ ವಿಷ್ಣೋರೇಕತ್ವೇಽಪಿ ಇಷ್ಟಕಾನಾಂ ಬಹುತ್ವಾದ್ವಾ ರೂಪಬಾಹುಲ್ಯೇನ ವಾ ಬಹುವಚನಂ 'ಯಾ ಇಷ್ಟಕಾ' ಇತಿ ಜ್ಞೇಯಮ್ । ಸ ಚಾಪಿ ನಚಿಕೇತಾ ಅಪಿ ಯಥೋಕ್ತಂ ಯಮೇನ ತತ್ ಪ್ರತ್ಯ-ವದತ್ ಅನೂದಿತವಾನ್ । ಅಥ ಅನುವಾದಾನಂತರಂ ಅನೂದಿತತ್ವಾತ್ ಹೇತೋರ್ವಾ ಅಸ್ಯ ನಚಿ-ಕೇತಸಃ ಸಂತುಷ್ಟಃ ಮೃತ್ಯುರ್ಯಮಃ ಪುನರಾಹ ॥ 14 ॥**

ಮಹಾತ್ಮನಾದ ಯಮದೇವನು ನಚಿಕೇತನ ಪ್ರಾರ್ಥನೆಯನ್ನು ಆಲಿಸಿದನು. ಗಂಭೀರವಾದ ಧ್ವನಿಯಿಂದ ಅವನನ್ನು ಕುರಿತು ಹೀಗೆ ಹೇಳಿದನು.

''ಎಲೈ ನಚಿಕೇತನೇ ನೀನು ಕೇಳಿರುವ ಅಗ್ನಿ ಎಂಬ ಹೆಸರುಳ್ಳ ನಾರಾಯಣನನ್ನು ನಾನು ಸರಿಯಾಗಿಯೇ ತಿಳಿದಿದ್ದೇನೆ. ಅವನು ತನ್ನ ಪೂಜೆಯಿಂದ ಸ್ವರ್ಗ ಮೋಕ್ಷಗಳೆರಡನ್ನೂ ಕೊಡುತ್ತಾನೆ. ಇಟ್ಟಿಗೆಗಳ ಕುಂಡದಲ್ಲಿ ಪ್ರತಿಷ್ಠಿತವಾದ ಅಗ್ನಿಯಲ್ಲಿ ಸನ್ನಿಹಿತನಾಗಿರುತ್ತಾನೆ. ಅವನ ಸ್ವರೂಪವನ್ನು ನಿನಗೆ ಸರಿಯಾಗಿ ತಿಳಿಯುವಂತೆ ಹೇಳುತ್ತೇನೆ. ನೀನು ಮನಸ್ಸಿಟ್ಟು ಕೇಳು.''

ಇಷ್ಟನ್ನು ಹೇಳಿ ಯಮನು ನಚಿಕೇತನಿಗೆ ಆ ಅಗ್ನಿಯ ಸ್ವರೂಪ ಮುಂತಾದ್ದನ್ನು ಉಪದೇಶಿಸಲಾರಂಭಿಸಿದನು.

''ಅಯ್ಯಾ ನಚಿಕೇತನೇ, ನಾನು ಉಪದೇಶಿಸುವ ಈ ಅಗ್ನಿಯ ಸ್ವರೂಪಜ್ಞಾನದಿಂದ ಅನಂತ ಎಂಬ ಹೆಸರಿನಿಂದ ಪ್ರಸಿದ್ಧನಾದ ವಿಷ್ಣುವಿನ ಲೋಕ ಪ್ರಾಪ್ತಿಯಾಗುತ್ತದೆ. ಈ ಅಗ್ನಿನಾಮಕ ಪರಮಾತ್ಮನು ಎಲ್ಲಾ ಲೋಕಗಳ ಸ್ಥಿತಿಗೆ ಕಾರಣನಾಗಿದ್ದಾನೆ. ಈತನು ಬಹಳ ದೂರದಲ್ಲಿ ವೈಕುಂಠದಲ್ಲಿಯೇ ಇದ್ದಾನೆಂದು ತಿಳಿಯಬೇಡ. ಇವರು ಎಲ್ಲಾ ಚೇತನರ ಹೃದಯಕಮಲದೊಳಗೆ ಯಾವಾಗಲೂ ಇದ್ದಾನೆ. ಇವನು ಸ್ಥಿತಿಗೆ ಮಾತ್ರವೇ ಅಲ್ಲ, ಎಲ್ಲಾ ಲೋಕಗಳ ಸೃಷ್ಟಿಗೂ ಕಾರಣನಾಗಿದ್ದಾನೆ. ಇಂತಹ ಹರಿಯು ಇಟ್ಟಿಗೆಗಳಿಂದ ರಚಿತವಾದ ಯಜ್ಞಕುಂಡದ ಅಗ್ನಿಯಲ್ಲಿ ಋತ್ವಿಜರಿಂದ ಭಕ್ತಿಯಿಂದ ಆವಾಹಿತನಾಗಿ ಬಂದು ಸನ್ನಿಹಿತನಾಗುತ್ತಾನೆ.''

ವೈವಸ್ವತನು ಇಷ್ಟನ್ನು ಹೇಳಿ ಅನಂತರ ಆ ಅಗ್ನಿಯ ಪೂಜೆಗೆ ಬೇಕಾಗಿರುವ ಯಜ್ಞಕುಂಡಕ್ಕೆ ಎಷ್ಟು ಇಟ್ಟಿಗೆಗಳು ಬೇಕಾಗುತ್ತವೆ ? ಆ ಇಟ್ಟಿಗೆಗಳ ಪರಿಮಾಣವು ಯಾವುವು ? ಅವುಗಳಲ್ಲಿ ವಿಷ್ಣುವು ಎಷ್ಟು ರೂಪಗಳಿಂದ ಸನ್ನಿಹಿತನಾಗಿರುತ್ತಾನೆ ? ಎಂಬ ವಿಷಯಗಳನ್ನೆಲ್ಲಾ ಕ್ರಮವಾಗಿ ಉಪದೇಶಿಸಿದನು. ಆ ಅಗ್ನಿಚಯನಕ್ಕೆ 360 ಇಟ್ಟಿಗೆಗಳು ಬೇಕಾಗುತ್ತವೆ. ಅವುಗಳಲ್ಲಿ ಒಬ್ಬನೇ ಆದ ಹರಿಯು ತನ್ನ ಅಚಿಂತ್ಯಾದ್ಭುತಶಕ್ತಿಯಿಂದ ಅನೇಕ ರೂಪಗಳನ್ನು ಧರಿಸಿ ನೆಲೆಸಿರುತ್ತಾನೆ. ಇಟ್ಟಿಗೆಗಳ 360 ಸಂಖ್ಯೆಗೆ ಅನುಗುಣವಾಗಿ ಪರಮಾತ್ಮನ 360 ರೂಪಗಳಿವೆ. ಇಟ್ಟಿಗೆಗಳ ಪರಿಮಾಣಕ್ಕೆ ತಕ್ಕಂತೆ ಪರಮಾತ್ಮನ ರೂಪಗಳ ಪರಿಮಾಣವಿರುತ್ತದೆ. ಈ ವಿಷಯಗಳನ್ನು ಕೂಲಂಕಷವಾಗಿ ತಿಳಿದು ಅಗ್ನಿಚಯನ ಮಾಡಬೇಕು.''

**ಕಿಮಾಹೇತ್ಯತ ಆಹ- ತಮಿತಿ ।**

**ತಮಬ್ರವೀತ್ ಪ್ರೀಯಮಾಣೋ ಮಹಾತ್ಮಾ**
**ವರಂ ತವೇಹಾದ್ಯ ದದಾಮಿ ಭೂಯಃ ।**

**ತವೈವ ನಾಮ್ನಾ ಭವಿತಾಽಯಮಗ್ನಿಃ**
**ಶೃಂಕಾಂ ಚೇಮಾಮನೇಕರೂಪಾಂ ಗೃಹಾಣ ॥ 15 ॥**

**ತಂ ನಚಿಕೇತಸಂ ಪ್ರೀಯಮಾಣಃ ಪ್ರೀತಿಮಾನ್ ಸನ್ ಮಹಾತ್ಮಾ ಮಹಾಮನಾಃ ಯಮಃ ಅಬ್ರವೀತ್ ಇತ್ಯುಕ್ತಾನುವಾದಃ ಆದರಾರ್ಥಃ । ಅದ್ಯ ಇದಾನೀಂ, ಭೂಯಃ ಪುನಃ, ವರತ್ರಯಾತ್ ಅನ್ಯಮಿತಿ ಯಾವತ್ । ವರಂ ಇಹ ಚಿತಿವಿಷಯೇ ತವ ದದಾಮಿ ಇತ್ಯಬ್ರವೀತ್ ಇತ್ಯರ್ಥಃ । ತಂ ವರಮಾಹ- ತವೈವೇತಿ । ಅಯಮಗ್ನಿಃ ಇಷ್ಟಕಚಿತಿರೂಪೋಽಗ್ನಿಃ ತವ ನಾಮ್ನೈವ ನಾಚಿಕೇತಾಗ್ನಿ- ರಿತ್ಯೇವಂರೂಪೇಣ ಭವಿತಾ ಭವಿಷ್ಯತಿ ಭವತು ಇತಿ ವ್ಯತ್ಯಯೋ ವಾ । ಅನೇಕರೂಪಾಂ ಬಹು- ರೂಪಾಂ ಸ್ವರ್ಣಮಯೀಮ್ ಇತಿ ಯಾವತ್ । 'ಬಹುರೂಪಂ ಚ ಪುರುಟಂ ಕಾರ್ತಸ್ವರಮಿತೀರ್ಯತೇ' ಇತ್ಯುಕ್ತೇಃ । ಶೃಂಕಾಂ ಕಂಠಮಾಲಾಂ ಚೇಮಾಂ ಗೃಹಾಣ ಇತ್ಯಬ್ರಮೀತ್ ಇತ್ಯನ್ವಯಃ ॥ 15 ॥**

ಯಮನು ವಿವರಿಸಿದ ಈ ವಿಷಯಗಳನ್ನು ಜಿಜ್ಞಾಸುವೂ, ಸೂಕ್ಷ್ಮ ಬುದ್ಧಿಯವನೂ ಆದ ನಚಿಕೇತನು ಗ್ರಹಿಸಿದನು. ಮತ್ತು ಆ ವಿಷಯವನ್ನೆಲ್ಲಾ ಸರಿಯಾಗಿ ಅನುವಾದ ಮಾಡಿದನು. ತಾನು ಹೇಳಿದ ವಿಷಯವನ್ನು ಕೂಡಲೇ ತಪ್ಪಿಲ್ಲದೆ ಅನುವಾದ ಮಾಡುವ ಶಿಷ್ಯನ ಮೇಲೆ ಗುರುವಿಗೆ ಬಹಳ ಹೆಚ್ಚಾದ ಪ್ರೀತಿಯುಂಟಾಗುವುದು ಸಹಜವಷ್ಟೆ? ಯಮನಿಗೆ ಬಹಳ ಸಂತೋಷವಾಯಿತು. ಮಹಾತ್ಮನಾದ ಯಮನ ಮುಖದಿಂದ ಅಭಿನಂದನೆಯ ಮಾತುಗಳು ಹೊರಹೊರಟವು.

"ಎಲೈ ನಚಿಕೇತನೇ, ನಿನ್ನ ಅನುವಾದದಿಂದ ನಾನು ಸಂತುಷ್ಟನಾದೆನು 360 ಇಟ್ಟಿಗೆಗಳಿಂದ ರಚಿತವಾದ ಅಗ್ನಿಕುಂಡದಲ್ಲಿ ಸನ್ನಿಹಿತನಾಗಿರುವ ಅಗ್ನಿ ನಾಮಕ ಪರಮಾತ್ಮನಿಗೆ ಇನ್ನು ಮುಂದೆ ನಾಚಿಕೇತಾಗ್ನಿ ಎಂದೇ ಹೆಸರಾಗಲಿ ಇದು ನನ್ನ ಹೆಚ್ಚಿನ ವರ. ಅಷ್ಟೇ ಅಲ್ಲ, ಇಲ್ಲಿ ನೋಡು. ಸುವರ್ಣದ ಈ ಸರವನ್ನು ನಿನಗೆ ನಾನು ಬಹುಮಾನವಾಗಿ ಕೊಡುತ್ತಿದ್ದೇನೆ. ಇದನ್ನು ಕೊರಳಲ್ಲಿ ಧರಿಸು."

**ತವೈವ ನಾಮ್ನಾ ಭವಿತಾಽಯಮಗ್ನಿರಿತ್ಯುಕ್ತಮ್ । ತಥೈವ ವ್ಯವಹರನ್ ತದನುಷ್ಠಾತೃಫಲಮಾಹ ತ್ರಿನಾಚಿಕೇತ ಇತಿ ।**

**ತ್ರಿನಾಚಿಕೇತಸ್ತ್ರಿಭಿರೇತ್ಯ ಸಂಧಿಂ**
**ತ್ರಿಕರ್ಮಕೃತ್ ತರತಿ ಜನ್ಮಮೃತ್ಯೂ ।**
**ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ**
**ನಿಚಾಯ್ಯೇಮಾಂ ಶಾಂತಿಮತ್ಯಂತಮೇತಿ ॥ 16 ॥**

**ನಚಿಕೇತಸಃ ಅಯಂ ನಾಚಿಕೇತಃ ನಾಚಿಕೇತಸ ಇತಿ ವಕ್ತವ್ಯೇ ಛಾಂದಸಃ ಸಲೋಪಃ । ತ್ರಯಃ ನಾಚಿಕೇತಾಃ ಯಸ್ಯಾಸೌ ತ್ರಿನಾಚಿಕೇತಃ, ತ್ರಿವಾರಾನುಷ್ಠಿತನಾಚಿಕೇತನಾಮಕಅಗ್ನಿಚಯನಃ ಪುಮಾನ್**

**ಇತ್ಯರ್ಥಃ । ತ್ರಿಭಿರ್ವೇದೈಃ ಸಂಧಿಂ ಸಂಧಾನಂ ಏತ್ಯ ಪ್ರಾಪ್ಯ ಯೋ ವರ್ತತೇ ವೇದತ್ರಯಾವಿರುದ್ಧೋ ವರ್ತತೇ, ವೇದತ್ರಯೋಕ್ತಮಾರ್ಗೇಣ ಭಗವತ್ತತ್ತ್ವಾದಿಕಂ ಜಾನನ್ ವರ್ತತ ಇತಿ ಯಾವತ್ । ತ್ರಿಭಿರೇತ್ಯ ಸಂಧಿಮಿತ್ಯಸ್ಯ ಪೂರ್ವತ್ರೋತ್ತರತ್ರ ಚಾನ್ವಯಃ । ತ್ರಿಕರ್ಮಕೃತ್ ಯಜ್ಞದಾನತಪಃಕರ್ತಾ, ಜನ್ಮಮೃತ್ಯೂ ತರತಿ ಮುಕ್ತೋ ಭವತೀತ್ಯರ್ಥಃ । ಕಿಮೇತಾವತೈವ ತ್ರಿನಾಚಿಕೇತತ್ವತ್ರಿಕರ್ಮಕೃತ್ವಮಾತ್ರೇಣ ಮುಕ್ತೋ ಭವತೀತ್ಯತಃ ತ್ರಿಭಿರೇತ್ಯ ಸಂಧಿಮಿತ್ಯುಕ್ತಮ್ । ಭಗವತ್ತತ್ತ್ವಾದಿಜ್ಞಾನಮಪ್ಯಾವಶ್ಯಕಂ ಇತಿ ಭಾವೇನ ತದ್-ವ್ಯನಕ್ತಿ- ಬ್ರಹ್ಮಜಜ್ಞಮಿತಿ । ಬ್ರಹ್ಮ ವೇದಃ ತತ್ರ ವ್ಯಕ್ತತ್ವಾತ್ ಬ್ರಹ್ಮಜೋ ವಿಷ್ಣುಃ । ಸಪ್ತಮ್ಯಾಂ ಜನೇರ್ಡಃ (ಪಾ.ಸೂ.3.9.97) । ಜಾನಾತೀತಿ ಜ್ಞಃ ಸರ್ವಜ್ಞಃ ಇಗುಪಧಜ್ಞಾಪ್ರೀಕಿರಃ ಕಃ (ಪಾ.ಸೂ.3.1.135) ಬ್ರಹ್ಮಜಶ್ಚಾಸೌ ಜ್ಞಶ್ಚ ಬ್ರಹ್ಮಜಜ್ಞಃ ತಂ ದೇವಂ ಕ್ರೀಡಾದಿಗುಣವಿಶಿಷ್ಟಮ್ । ಈಡ್ಯಂ ಬ್ರಹ್ಮಾದಿಭಿಃ ಸ್ತುತ್ಯಂ, ನಿಚಾಯ್ಯ ವಿಚಾರ್ಯ । ವಿದಿತ್ವಾ ಸಾಕ್ಷಾತ್ಕೃತ್ಯ । ಇಮಾಂ ವೇದಾದ್ಯುಕ್ತಾಂ ಪೂರ್ವೋತ್ತರಜನ್ಮ-ಮೃತ್ಯೂತ್ತರಣರೂಪಾಂ ವಕ್ಷ್ಯಮಾಣರೂಪಾಂ ವಾ ಶಾಂತಿಂ ಅತ್ಯಂತಂ ಯಥಾ ಭವತಿ ತಥಾ ಏತಿ ಪ್ರಾಪ್ನೋತೀತಿ ॥ 16 ॥**

ಈ ಅಗ್ನಿಗೆ ನಚಿಕೇತಾಗ್ನಿ ಎಂದು ಹೆಸರು ಬರಲಿ ಎಂದು ನಾನು ವರಕೊಟ್ಟೆನಲ್ಲವೆ ? ಈ ವರವನ್ನು ನಾನೇ ಕಾರ್ಯರೂಪಕ್ಕೆ ತರುತ್ತೇನೆ. ಮೂರು ಬಾರಿ ನಚಿಕೇತಾಗ್ನಿಚಯನ ಮಾಡಿ, ಋಗ್, ಯಜುಸ್ ಸಾಮ ವೇದಗಳೆಂಬ ಮೂರು ವೇದಗಳನ್ನು ಅನುಸರಿಸಿ ಅವುಗಳಿಗೆ ವಿರೋಧವಿಲ್ಲದಂತೆ ಕರ್ಮಾನುಷ್ಠಾನ ಮಾಡುತ್ತಾ, ಆ ವೇದಗಳಿಗೆ ಸರಿಯಾದ ಅರ್ಥವನ್ನು ತಿಳಿಯಬೇಕು. ಯಾವಾಗಲೂ ಯಜ್ಞ, ದಾನ, ತಪಸ್ಸು ಎಂಬ ಮೂರು ಕರ್ಮಗಳನ್ನು ಬಿಡದೆ ಆಚರಿಸಬೇಕು. ಹೀಗೆ ಮಾಡುವ ಚೇತನನು ಪುನಃ ಹುಟ್ಟುವುದಿಲ್ಲ, ಸಾಯುವುದೂ ಇಲ್ಲ. ಅಂದು ಈ ಸಂಸಾರವನ್ನು ದಾಟಿ ಮೋಕ್ಷವನ್ನೇ ಪಡೆಯುತ್ತಾನೆ. ಅದು ಇಷ್ಟರಿಂದಲೇ ಮೋಕ್ಷವಾಗುತ್ತದೆಯೆಂದು ತಿಳಿಯಬಾರದು. ಮೋಕ್ಷ-ವಾಗಬೇಕಾದರೆ ಪರಮಾತ್ಮ ಸ್ವರೂಪದ ಅಪರೋಕ್ಷ ಜ್ಞಾನವಾಗಬೇಕು. ಅದಕ್ಕೂ ಮೊದಲು ಪರಮಾತ್ಮನ ಅಧೀನವಾದ ಅಸ್ವತಂತ್ರ ತತ್ವಗಳ ಸರಿಯಾದ ಜ್ಞಾನವೂ ಆಗಬೇಕು. ಪರಮಾತ್ಮನು ವೇದಗಳಿಂದಲೇ ವ್ಯಕ್ತನಾಗುತ್ತಾನೆ. ಸರ್ವಜ್ಞನಾದ ಅವನು ಪೂರ್ಣಾನಂದವನ್ನು ಹೊಂದಿರುತ್ತಾನೆ. ಆದರೂ ಬಾಲಕರು ಮತ್ತು ಉನ್ಮತ್ತರು ಆಟವಾಡುವಂತೆ ಪ್ರಪಂಚವನ್ನು ಸೃಜಿಸಿ, ರಕ್ಷಿಸಿ, ನಿಯಮಿಸಿ, ಸಂಹರಿಸುತ್ತಾನೆ. ಇನ್ನೂ ಅನೇಕ ಕಾರ್ಯಗಳನ್ನು ಲೀಲೆಯಿಂದಲೇ ಮಾಡುತ್ತಾ ಇರುತ್ತಾನೆ. ಬ್ರಹ್ಮ ರುದ್ರ ಮುಂತಾದ ಸಮಸ್ತ ಚೇತನರೂ ಯಾವಾಗಲೂ ಅವನ ಈ ಸೃಷ್ಟಿ ಮುಂತಾದ ಅದ್ಭುತ ಕಾರ್ಯಗಳನ್ನು ಲೀಲೆಯಿಂದಲೇ ಮಾಡುತ್ತಾ ಇರುತ್ತಾನೆ. ಬ್ರಹ್ಮ ರುದ್ರ ಸಮಸ್ತ ಚೇತನರೂ ಯಾವಾಗಲೂ ಈ ಸೃಷ್ಟಿ ಮುಂತಾದ ಅದ್ಭುತ ವ್ಯಾಪಾರಗಳನ್ನು ಹೊಗಳುತ್ತಾ ಅವನನ್ನೇ ಸರ್ವೋತ್ತಮನೆಂದು ಸ್ತುತಿಸುತ್ತಾರೆ. ಪರಮಾತ್ಮನ ದರ್ಶನವಾಗಬೇಕಾದರೆ ಗುರುಗಳ ಮುಖದಿಂದ ಅವನ ಮಹಿಮೆಯನ್ನು ಕೇಳಿ (ಶ್ರವಣ ಮಾಡಿ) ಮನಸ್ಸಿನಲ್ಲಿ ಯುಕ್ತಿ ಮಥನದಿಂದ ವಿಮರ್ಶಿಸಿ, ಅವನ ರೂಪವನ್ನು ಧ್ಯಾನಿಸಬೇಕು. ಭಕ್ತಿಯುಕ್ತವಾದ ಧ್ಯಾನದಿಂದ ಪ್ರಸನ್ನನಾಗಿ ಅವನು ತನ್ನ ಸ್ವರೂಪವನ್ನು ಭಕ್ತನಿಗೆ ಗೋಚರವಾಗುವಂತೆ ಮಾಡುತ್ತಾನೆ. ಅನಂತರ ಭಕ್ತನು ತನ್ನ ಪ್ರಾರಬ್ಧಕರ್ಮವನ್ನು ಕಳೆದುಕೊಂಡು ಜನನಮರಣಪ್ರವಾಹರೂಪವಾದ ಸಂಸಾರವನ್ನು ದಾಟುತ್ತಾನೆ. ಆಗ ಭಕ್ತನಿಗೆ ತನ್ನ ಸ್ವರೂಪವಾಗಿರುವ ಆನಂದವು ಅನುಭವಕ್ಕೆ ಬರುತ್ತದೆ. ಆ ಆನಂದವನ್ನು ಮೀರಿಸುವ ಆನಂದವೇ ಇಲ್ಲ, ಇದೇ ಮೋಕ್ಷ.

ಉಕ್ತಮೇವಾರ್ಥಂ ಪುನರ್ವಿಶದಮಾಹ – ತ್ರಿನಾಚಿಕೇತ ಇತಿ ।

ತ್ರಿನಾಚಿಕೇತಸ್ತ್ರಯಮೇತದ್ ವಿದಿತ್ವಾ
ಯ ಏವಂ ವಿದ್ವಾಂಶ್ಚಿನುತೇ ನಾಚಿಕೇತಮ್ ।
ಸ ಮೃತ್ಯುಪಾಶಾನ್ ಪುರತಃ ಪ್ರಣೋದ್ಯ
ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥ 17 ॥

ಯೋ ವಿದ್ವಾನ್ ತ್ರಿನಾಚಿಕೇತಃ ತ್ರಿವಾರಂ ನಾಚಿಕೇತಾಗ್ನಿಮನುತಿಷ್ಠನ್ ಏತತ್ ತ್ರಯಂ 'ಯಾ ಇಷ್ಟಕಾಃ ಇತ್ಯಾದಿನೋಕ್ತಂ ವಿಷ್ಣುರೂಪೇಷ್ಟಕಾದೇವತೇಷ್ಟಕಾಸಂಖ್ಯೇಷ್ಟಕಾಪರಿಮಾಣರೂಪಂ ತ್ರಯಂ ವಿದಿತ್ವಾ ಏವಂ ಜ್ಞಾತಪ್ರಕಾರೇಣ ನಾಚಿಕೇತಾಗ್ನಿಂ ಚಿನುತೆ ಶ್ಯೇನಕೂರ್ಮಾದ್ಯಾಕಾರೇಣ ಇಷ್ಟಕಾ-ದಿಭಿಃ ವೇದಿಂ ಕರೋತಿ ಸ ಪುಮಾನ್ ಪುರತಃ ಪುರಃ ಸ್ಥಿತಾನ್ ಮೃತ್ಯುಪಾಶಾನ್ ಯಮಪಾಶಾನ್ ಪ್ರಣೋದ್ಯ ನಿರಸ್ಯ ಶೋಕಾತಿಗಃ ಶೋಕಾನತಿಕ್ರಾಂತಃ ಸ್ವರ್ಗಲೋಕೇ ಹರಿಲೋಕೇ ಮೋದತೇ ಸುಖಮನುಭವತಿ ॥ 17 ॥

ನಚಿಕೇತನೇ, ನಾನು ಹೇಳಿದ ಈ ವಿಷಯಗಳಲ್ಲಿ ನೀನು ಸ್ವಲ್ಪವೂ ಸಂಶಯಪಡಬೇಕಾಗಿಲ್ಲ. ಇನ್ನೊಮ್ಮೆ ಹೇಳುತ್ತೇನೆ ಕೇಳು. ಉತ್ತಮ ಜ್ಞಾನವನ್ನು ಹೊಂದಿ ಮೂರು ಬಾರಿ ನಚಿಕೇತಾಗ್ನಿಚಯನವನ್ನು ಮಾಡಬೇಕು. 360 ಇಟ್ಟಿಗೆಗಳಿಗೆ ಅಭಿಮಾನಿಯಾಗಿರುವ ವಿಷ್ಣುವಿನ 360 ರೂಪಗಳನ್ನೂ ಆ ರೂಪಗಳ ಪರಿಮಾಣವನ್ನೂ ತಿಳಿದು ನಾಚಿಕೇತಾಗ್ನಿಯನ್ನು ಗಿಡುಗ, ಆಮೆ ಮುಂತಾದ ಆಕಾರದಿಂದ ನಿರ್ಮಿಸಿದ ಯಜ್ಞಕುಂಡಗಳಲ್ಲಿ ಇಷ್ಟಿಗಳಿಂದ ಆರಾಧಿಸಬೇಕು. ಇಂತಹ ಜ್ಞಾನಿಯು ಮರಣಕಾಲದಲ್ಲಿ ನನ್ನ ದೂತರು ಅಥವಾ ನಾನು ತಂದು ಒಡ್ಡಿದ ನನ್ನ ಪಾಶಗಳನ್ನು ದೂರಕ್ಕೆ ತಳ್ಳುತ್ತಾನೆ. ಎಲ್ಲಾ ದುಃಖಗಳಿಂದ ಬಿಡುಗಡೆ ಹೊಂದಿ, ವೈಕುಂಠಲೋಕವನ್ನು ಸೇರಿ ಸುಖದಿಂದ ವಾಸಿಸುತ್ತಾನೆ.''

ಉಪಸಂಹರತಿ – ಏಷ ಇತಿ ॥

ಏಷ ತೇಗ್ನಿರ್ನಾಚಿಕೇತಃ ಸ್ವರ್ಗ್ಯೋ-
ಮವೃಣೀಥಾ ದ್ವಿತೀಯೇನ ವರೇಣ ।
ಏತಮಗ್ನಿಂ ತವೈವ ಪ್ರವಕ್ಷ್ಯಂತಿ ಜನಾಸಃ
ತೃತೀಯಂ ವರಂ ನಚಿಕೇತೋ ವೃಣೀಷ್ವ ॥ 18 ॥

ದ್ವಿತೀಯೇನ ವರೇಣ ದ್ವಿತೀಯಂ ವರಂ ಯಮವೃಣೀಥಾ ವೃತವಾನಸಿ ಏಷ ಸ್ವರ್ಗ್ಯಃ ಸ್ವರ್ಗಸಾಧನಃ ನಾಚಿಕೇತನಾಮಕೋಽಗ್ನಿಃ ತೇ ಕಥಿತಃ ಇತಿ ಯೋಜ್ಯಮ್ । ಪ್ರೀತ್ಯಾ ಸ್ವದತ್ತಂ ವರಂ ನಿರ್ಧಾರಯತಿ । ಏತಮಗ್ನಿಂ ತವೈವ ತ್ವತ್ಸಂಬಂಧಿನಮೇವ, ತ್ವನ್ನಾಮ್ನೈವೇತಿ ಯಾವತ್, ಜನಾಸೋ ಜನಾಃ ಆಜ್ಜಸೇರಸುಕ್

**ಪ್ರವಕ್ಷ್ಯಂತಿ ಪ್ರವದಿಷ್ಯಂತೀತಿ ಯಮೋ ವಕ್ತಿ । ತೃತೀಯಂ ವರಮಿತಿ । ವೃಣೀಷ್ವೇತ್ಯುವಾಚ ಯಮ ಇತ್ಯರ್ಥಃ ।। 18 ।।**

ಯಮದೇವನ ಮಾತು ಮತ್ತು ಮುಂದುವರೆಯಿತು. ಬೇಗನೇ ಮೂರನೆಯ ವರವನ್ನು ಕೊಟ್ಟು ಬಂದ ಅತಿಥಿಯನ್ನು ತ್ವರಿತವಾಗಿ ಸಾಗಹಾಬೇಕೆಂಬ ಆಶಯವು ಅವನಲ್ಲಿ ಒಡಮೂಡಿದಂತಿತ್ತು. ಅವನೆಂದನು.

''ನಚಿಕೇತ, ಎರಡನೆಯ ವರದಿಂದ ನೀನು ನಾಚಿಕೇತಾಗ್ನಿಯ ವಿಷಯವನ್ನು ಕೇಳಿದಿಯಷ್ಟೆ ಈ ಅಗ್ನಿಯು ಸ್ವರ್ಗ ಮತ್ತು ಮೋಕ್ಷ ಇವೆರಡಕ್ಕೂ ಸಾಧನವೆಂದು ನಾನು ಹಿಂದೆಯೇ ತಿಳಿಸಿದ್ದೇನೆ. ಈ ಅಗ್ನಿಯನ್ನು ನಿನ್ನ ಹೆಸರಿನಿಂದಲೇ ನಾಚಿಕೇತಾಗ್ನಿಯೆಂದು ಜನಗಳು ವ್ಯವಹರಿಸುತ್ತಾರೆ ಎಂದೂ ವರವನ್ನು ಕೊಟ್ಟಿದ್ದೇನೆ. ಬೇಗನೇ ಮೂರನೆಯ ವರವನ್ನು ಕೇಳು.''

ಗುರುವಿನ ಹೊಗಳಿಕೆಗೆ ಇಷ್ಟರಮಟ್ಟಿಗೆ ಪಾತ್ರನಾದ ಶಿಷ್ಯನು ಎಷ್ಟೊಂದು ಉಬ್ಬಿ ಹೋಗಲಾರನು. ಇನ್ನೂ ಎಳೆವಯಸ್ಸಿನ ನಚಿಕೇತನ ಹೆಸರು ಅಗ್ನಿಯ ಜೊತೆಗೆ ಸೇರಿ ಅಜರಾಮರವಾಯಿತು. ಮೂರು ಲೋಕಗಳಲ್ಲಿಯೂ ಸುಪ್ರಸಿದ್ಧವಾಯಿತು. ಬಂಗಾರದ ಸರವೊಂದು ಉಡುಗೊರೆಯಾಗಿ ಅವನ ಕಂಠವನ್ನು ಅಲಂಕರಿಸಲು ಯಮನ ಕೈಯಲ್ಲಿ ಲಕಲಕಿಸುತ್ತಾ ಇತ್ತು. ಈ ಸನ್ನಿವೇಶದಲ್ಲಿ ಎಂತಹವರೂ ಮೈಮರೆತು ಉದ್ದೇಶವನ್ನು ಬಿಟ್ಟುಬಿಡುವುದು ಸವಾಭಾವಿಕ. ಆದರೆ ತನ್ನ ಧ್ಯೇಯಮಾರ್ಗವನ್ನು ಸರಿಯಾಗಿ ನಿಶ್ಚಯಿಸಿಕೊಂಡಿದ್ದ ಕುಮಾರ ನಚಿಕೇತನು ನಶ್ವರ ವಿಷಯಗಳನ್ನು ಆಶಿಸದೆ ಬಹಳ ಮಹತ್ವಪೂರ್ಣವಾದ ವಿಷಯವನ್ನಾರಿಸಿಕೊಂಡು ಮೂರನೆಯ ವರವನ್ನು ಕೇಳಲು ಆರಂಭಿಸಿದನು.

**ತೃತೀಯವರವರಣಪ್ರಕಾರಮಾಹ - ಯೇಯಮಿತಿ ।**

**ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ**<br>
**ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ ।**<br>
**ಏತದ್ವಿದ್ಯಾಮನುಶಿಷ್ಟಸ್ತ್ವಯಾऽಹಂ**<br>
**ವರಾಣಾಮೇಷ ವೃತಸ್ತೃತೀಯಃ ।। 19 ।।**

**ಪ್ರೇತೇ ಮೃತಪುರುಷೇ ಮುಕ್ತೇ ಚ ಮನುಷ್ಯೇ ನಿಯಾಮಕತ್ವೇನ ಭಗವಾನಸ್ತೀತಿ ಏಕೇ ಜ್ಞಾನಿನೋ ವದಂತಿ । ನಾಸ್ತೀತ್ಯಜ್ಞಾಃ । ಅತೋ ವಿಪ್ರತಿಪತ್ತೇಃ ಮಮ ಜಾತಾ ಇಯಂ ವಿಚಿಕಿತ್ಸಾ ಸಂದೇಹಃ ಏತದ್ವಿಚಿಕಿತ್ಸಾವಿಷಯಂ ಮೃತಮುಕ್ತಜೀವಯೋಃ ಪ್ರೇರಕಸ್ವರೂಪಮಹಂ ತ್ವಯಾನುಶಿಷ್ಟಃ ಸನ್ ಉಪ-ದಿಷ್ಟಸ್ಸನ್ ವಿದ್ಯಾಂ ಜಾನೀಯಾಮ್ । ವರಾಣಾಂ ಮಧ್ಯೇ ಏಷ ವರಃ ವಿಚಿಕಿತ್ಸಾವಿಷಯಮೃತಮುಕ್ತ-ಪ್ರೇರಕಸ್ವರೂಪೋಪದೇಶನಪ್ರಾರ್ಥನರೂಪಃ ತೃತೀಯೋ ಮಯಾ ವೃತ ಇತಿ ನಚಿಕೇತಾ ಯಮ-ಮುವಾಚೇತಿ ಯೋಜ್ಯಮ್ ।। 19 ।।**

ಮೃತ್ಯುದೇವ ! ಮಾನವನಿಗೆ ಮರಣ ಮತ್ತು ಮುಕ್ತಿಗಳೆಂಬ ಎರಡು ಅವಸ್ಥೆಗಳಿವೆಯೆಂದು ನಾನು ಕೇಳಿದ್ದೇನೆ. ಇವೆರಡು ಅವಸ್ಥೆಗಳಲ್ಲಿಯೂ ಪಾಂಚಭೌತಿಕ ದೇಹವನ್ನು ಬಿಟ್ಟುಹೋದ, ಚೇತನನಲ್ಲಿ ಹಾಗೂ ಮುಕ್ತ ಚೇತನನಲ್ಲಿಯೂ

ಪರಮಾತ್ಮನು ಇರುತ್ತಾನೆ. ಅವನು ಆಯಾ ಕಾರ್ಯಗಳಲ್ಲಿ ಆ ಅವಸ್ಥೆಗಳಲ್ಲಿಯೂ ಜೀವನನ್ನು ಪ್ರೇರಿಸುತ್ತಾನೆ. ಇದನ್ನೇ ನಿಯಮನ ಎನ್ನುತ್ತಾರೆ ಎಂದೂ ಹೀಗೆ ಪ್ರೇರಿಸುವ ಪರಮಾತ್ಮನು ಆ ಎರಡು ಅವಸ್ಥೆಗಳಲ್ಲಿಯೂ ಜೀವನಿಗಿಂತ ಭಿನ್ನನಾಗಿಯೇ ಇರುತ್ತಾನೆಂದೂ ಕೆಲವರು ಹೇಳುತ್ತಾರೆ.

ಮತ್ತೆ ಕೆಲವರು ಸತ್ತುಹೋದ ಅಥವಾ ಮುಕ್ತನಾದ ಜೀವನಲ್ಲಿ ಅವನಿಗಿಂತ ಭಿನ್ನವಾಗಿರುವ ಯಾವ ನಿಯಾಮಕರೂ ಇಲ್ಲ, ಅವನು ಬ್ರಹ್ಮನ ಅಭೇದವನ್ನು ಪಡೆಯುತ್ತಾನೆ ಎನ್ನುತ್ತಾರೆ.

ಈ ವಿಷಯದಲ್ಲಿ ನನಗೆ ಸಂಶಯವಿದೆ. ಸತ್ತಮೇಲೆ ಮತ್ತು ಮುಕ್ತನಾದಮೇಲೆ ಜೀವನಿಗೆ ಪ್ರೇರಕನಾದ ಭಗವಂತನಿದ್ದರೆ ಅವನ ಸ್ವರೂಪವೇನು ? ಆ ವಿಷಯವನ್ನು ನಿನ್ನ ಉಪದೇಶದಿಂದ ನಾನು ಸರಿಯಾಗಿ ತಿಳಿಯಬೇಕಾಗಿದೆ. ನನಗೆ ಬೇಕಾಗಿರುವ ಮೂರನೆಯ ವರವು ಇದೇ ಆಗಿದೆ.

**ಏವಂ ನಚಿಕೇತಸಾ ಪ್ರಾರ್ಥಿತೋ ಯಮಃ, ಅಣೋರಣೀಯಾನಿತ್ಯಾದಿನಾ ದ್ವಿತೀಯಾಧ್ಯಾಯೇ ಮುಕ್ತಜೀವನಿಯಾಮಕಸ್ವರೂಪಂ, ಯಥಾ ಮರಣಂ ಪ್ರಾಪ್ಯೇತ್ಯಾದಿನಾ ಪಂಚಮೇ ಮೃತಜೀವ-ನಿಯಾಮಕಂ ಚ ವಕ್ಷ್ಯನ್ ತೃತೀಯಪ್ರಶ್ನವಿಷಯಪ್ರೇತಸ್ಥ ಈಶ್ವರಸ್ವರೂಪಸ್ಯಾತಿದುರ್ಜ್ಞೇಯತ್ವಾದಿ ಮಹಾತ್ಮ್ಯಮಾಹ- ದೇವೈರಿತಿ ॥**

**ದೇವೈರತ್ರಾಪಿ ವಿಚಿಕಿತ್ಸಿತಂ ಪುರಾ**
**ನ ಹಿ ಸುಜ್ಞೇಯೋಽಣುರೇಷ ಧರ್ಮಃ ।**
**ಅನ್ಯಂ ವರಂ ನಚಿಕೇತೋ ವೃಣೀಷ್ವ**
**ಮಾ ಮೋಪರೋತ್ಸೀರತಿ ಮಾ ಸೃಜೈವಮ್ ॥ 20 ॥**

**ಯದ್ಯಪಿ 'ಪ್ರ ತೇ ಬ್ರವೀಮೀ'ತ್ಯಾದಿನೋಕ್ತದ್ವಿತೀಯವರೋಕ್ತಿರಪಿ ಇಷ್ಟಕಚಿತಾಗ್ನಿಸ್ಥಭಗವ-ದ್ವಿಷಯೈವ । ಅಥಾಪಿ ತಜ್ಜ್ಞಾನೇನ ಮುಕ್ತೌ ಸುಖಾತಿಶಯೋ ನ ತು ಮುಕ್ತಿಃ । ಸಾ ತು ಪ್ರೇತಪ್ರೇರಕ-ತದ್ಗುಣಾದಿಮಹಾತ್ಮ್ಯಜ್ಞಾನಾದೇವೇತಿ ಅಸ್ಯ ದುರ್ಜ್ಞೇಯತ್ವೋಕ್ತಿಃ ದೇವೈರಪ್ಯತ್ರ ತ್ವತ್‌ಕೃತಪ್ರಶ್ನ-ವಿಷಯೇ ಪುರಾ ಪೂರ್ವಂ ವಿಚಿಕಿತ್ಸಿತಂ ಸಂದಿಗ್ಧಮಾಸೀತ್ । ತೇಽಪಿ ಸಂದೇಹವಂತಃ ಅಭವನ್ । ಕುತಃ ? ನ ಹಿ ಸುಜ್ಞೇಯಃ । ಹಿ ಯತಃ ಸುಖೇನ ಜ್ಞೇಯೋ ನ ಭವತಿ । ತತ್ ಕಿಮಿತ್ಯತ ಆಹ- ಅಣುರೇಷ ಧರ್ಮ ಇತಿ । ಅಣು ಸೂಕ್ಷ್ಮಃ ಅವ್ಯಕ್ತಸ್ವಭಾವಃ, ಧಾರಕತ್ವಾದ್ ಧರ್ಮೋ ಭಗವಾನ್, ಧೃ ಧಾರಣೇ ಮಪ್ರತ್ಯಯಃ, ಅತಃ ಕಾರಣಾತ್, ಹೇ ನಚಿಕೇತಃ ಅನ್ಯಂ ವರಂ ಪ್ರೇತನಿಯಾಮಕ ಉಪದೇಶವರಾದನ್ಯಂ ವರಂ ವೃಣೀಷ್ವ । ಮಾ ಮಾಂ ಮೋಪರೋತ್ಸೀಃ ಉಪರೋಧಮ್ ಏತತ್ ಪ್ರಶ್ನವಿಷಯಂ ಬ್ರೂಹೀತಿ ನಿರ್ಬಂಧಂ ನ ಕುರ್ವಿತಿ ಯಮ ಉವಾಚೇತ್ಯರ್ಥಃ । ಏವಂ ಯಮೇನೋಕ್ತೋ ನಚಿಕೇತಾ ವಕ್ತಿ ಮಾತಿ-ಸೃಜೈವಮಿತಿ । ಏವಮುಕ್ತಪ್ರಕಾರೇಣ ಮಾಽತಿಸೃಜ ಅತಿಸರ್ಜನಂ ಪರಿತ್ಯಾಗಂ ಮಾ ಕಾರ್ಷೀಃ । ॥ 20 ॥**

ನಚಿಕೇತನ ಹೃದಯದ ಆಳವು ಯಮಧರ್ಮನಿಗೆ ಚೆನ್ನಾಗಿ ತಿಳಿಯಿತು. ಯೋಗ್ಯನಾದ ಶಿಷ್ಯನಿಗೆ ಉಪದೇಶಿಸುವ ಸುಸಂದರ್ಭವು ತನಗೆ ದೊರೆಯಿತೆಂದು ಆತನು ಮನದಲ್ಲಿಯೇ ಆನಂದಿತನಾದನು. ಮುಕ್ತ ಜೀವನಿಯಾಮಕ ಭಗವಂತನನ್ನು ಅಣೋರಣೀಯಾನ್ ಇತ್ಯಾದಿ ರೀತಿಯಿಂದ ಅವನು ಉಪದೇಶಿಸಲು ಪ್ರಾರಂಭಿಸುವವನಿದ್ದಾನೆ. (2ನೇ ಅಧ್ಯಾಯ ವಲ್ಲಿ 1) ಹಾಗೆಯೇ ಮೃತಜೀವನ ನಿಯಾಮಕ ರೂಪವನ್ನು ಯಥಾ ಮರಣಂ ಪ್ರಾಪ್ಯ (2ನೇ ಅ. ವಲ್ಲಿ 2) ಎಂದು ಮುಂತಾಗಿ ಹೇಳಲಿದ್ದಾನೆ. ಆದರೆ ಏಕಾಏಕಿಯಾಗಿ ವಿಷಯವನ್ನು ಉಪದೇಶಿಸಿದರೆ ಅದಕ್ಕೆ ಮಹತ್ವವು ಬರುವುದಿಲ್ಲ. ಕೇಳುವವರ ಮನಸ್ಸಿಗೆ ಅದು ಸರಿಯಾಗಿ ನಾಟದೆಯೂ ಹೋಗಬಹುದು. ಆದುದರಿಂದ ಇವನಿಗೆ ಈ ವಿಷಯವನ್ನು ತಿಳಿಯಲೇಬೇಕು ಎಂಬ ಮನೋದಾರ್ಢ್ಯವಿದೆಯೇ ಎಂದು ಪರೀಕ್ಷಿಸಲು ಯಮನು ತಿಳಿಯಬೇಕಾದ ವಿಷಯದ ಮಹಾತ್ಮ್ಯವನ್ನು ಹೇಳಲು ಪ್ರಾರಂಭಿಸುತ್ತಾನೆ.

ಅಯ್ಯಾ ನಚಿಕೇತನೇ ! ನೀನು ಕೇಳಿದ ಈ ಪ್ರಶ್ನೆಯೂ ಗಹನವಾದುದು. ಉತ್ತರವೂ ಜಟಿಲವಾದುದು. ದೇವತೆಗಳೂ ಸಹ ಈ ವಿಷಯದಲ್ಲಿ ಸಂದೇಹಪಟ್ಟಿದ್ದಾರೆ, ವಿಮರ್ಶಿಸಿದ್ದಾರೆ. ಈ ವಿಷಯವು ಸುಲಭವಾಗಿ ತಿಳಿಯಲು ಸಾಧ್ಯವಾಗಿದ್ದರೆ ಅವರು ಸಂದೇಹಪಡುತ್ತಿದ್ದರೆ ? ಪರಮಾತ್ಮನಿಗೆ ಧರ್ಮಃ ಎಂಬ ಹೆಸರಿದೆಯೆಂದು ನೀನು ಕೇಳಿರಬಹುದು. ಸರ್ವವನ್ನೂ ಧರಿಸುವವನು ಅವನೇ. ಆದ್ದರಿಂದ ಅವನಿಗೆ ಆ ಹೆಸರು ಬಂದಿದೆ. ಅಂತಹ ಪರಮಾತ್ಮನು ಬಹು ಸೂಕ್ಷ್ಮನಾದವನು. ಆದ್ದರಿಂದ ಅವನ ವಿಷಯದಲ್ಲಿ ಪ್ರಶ್ನೆ ಮಾಡಬೇಡ. ಇದನ್ನು ಬಿಟ್ಟು ಬೇರೆ ಯಾವುದನ್ನೇ ಆದರೂ ಕೇಳು. ಇದೇ ಪ್ರಶ್ನೆಗೆ ಉತ್ತರ ಹೇಳಬೇಕೆಂದು ನಿರ್ಬಂಧಿಸಬೇಡ.★

ಹೀಗೆ ಯಮನು ತನ್ನ ಕೈಬಿಡುವನೆಂದು ನಚಿಕೇತನು ಯೋಚಿಸಿರಲಿಲ್ಲ. ಅವನು ಕೂಡಲೇ ಕೇಳಿದನು. "ದೇವ, ಹೀಗೆ ನನ್ನ ಕೈಬಿಡಬೇಡ. ನನ್ನ ಪ್ರಶ್ನೆಗೆ ಬಲ್ಲವನಾದ ನೀನು ಉತ್ತರವನ್ನು ಕೊಡಲೇಬೇಕು.

**ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ**
**ತ್ವಂ ಚ ಮೃತ್ಯೋ ಯನ್ನ ಸುಜ್ಞೇಯಮಾತ್ಥ ।**
**ವಕ್ತಾ ಚಾಸ್ಯ ತ್ವಾದೃಗನ್ಯೋ ನ ಲಭ್ಯೋ**
**ನಾನ್ಯೋ ವರಃ ತುಲ್ಯ ಏತಸ್ಯ ಕಶ್ಚಿತ್ ॥ 21 ॥**

**ಕುತಃ ? ಹೇ ಮೃತ್ಯೋ ತ್ವಂ ಚ ತ್ವಮಪಿ ಯದ್ ಯಸ್ಮಾತ್ ದೇವೈರಪ್ಯತ್ರ ವಿಚಿಕಿತ್ಸಿತಮ್ । ಸುಜ್ಞೇಯಂ ಚ ನೇತಿ ಆತ್ಥ ವದಸಿ । ವಕ್ತಾ ಚ ತ್ವಾದೃಗನ್ಯಃ ಅಸ್ಯ ಮತ್‌ಪ್ರಶ್ನವಿಷಯಸ್ಯ ನ ಲಭ್ಯಃ । ಏತಸ್ಯ ಕಶ್ಚಿತ್ ತುಲ್ಯೋ ವರೋऽನ್ಯೋ ನಾಸ್ತಿ । ತಸ್ಮಾದೇತದೇವ ಬ್ರೂಹೀತ್ಯರ್ಥಃ ॥ 21 ॥**

---

★ (ಇಲ್ಲಿ ಶಿಷ್ಯನು ಗುರುವನ್ನು ಕೇಳುತ್ತಾನೆ)

ಗುರುದೇವ, ಎರಡನೆಯ ವರದಲ್ಲಿಯೂ ಇಟ್ಟಿಗೆಗಳ ಚಿತೆಯಲ್ಲಿ ಸನ್ನಿಹಿತನಾದ ಪರಮಾತ್ಮನ ಸ್ವರೂಪವನ್ನು ಯಮನು ತಿಳಿಸಿರುತ್ತಾನೆ. ಹಾಗಿರುವಾಗ ಅವನ ವಿಷಯ ಏಕೆ ಹೇಳಬಾರದು ? ಆದರಲ್ಲಿ ಮುಚ್ಚುಮರೆ ಏನಿದೆ ? ಪರಮಾತ್ಮನ ರೂಪಗಳಲ್ಲಿ ಭೇದವಿಲ್ಲವಷ್ಟೆ ?

ಗುರು – ಹೌದು, ಪರಮಾತ್ಮನು ಒಬ್ಬನೇ, ಆದರೆ ಹಿಂದೆ ಹೇಳಿದಂತೆ ಪರಮಾತ್ಮನ ಸ್ವರೂಪವನ್ನು ತಿಳಿದರೆ ಮುಕ್ತಿಯಲ್ಲಿ ಆನಂದಾತಿಶಯ ಉಂಟಾಗುತ್ತದೆ. ಮುಕ್ತಿ ಉಂಟಾಗುವುದಿಲ್ಲ. ಅದು ಉಂಟಾಗಬೇಕಾದರೆ ಮೃತನಲ್ಲಿ ಮತ್ತು ಮುಕ್ತನಲ್ಲಿರುವ ಪರಮಾತ್ಮನ ಮಹಿಮಾತಿಶಯವನ್ನೇ ತಿಳಿಯಬೇಕು.

ನಚಿಕೇತನು ಹೇಳುತ್ತಿದ್ದಾನೆ – ಮೃತ್ಯುದೇವ, ದೇವತೆಗಳೂ ಈ ವಿಷಯದಲ್ಲಿ ಸಂಶಯಪಟ್ಟಿರುವರೆಂದು ನೀನೇ ಹೇಳಿದೆ. ಈ ವಿಷಯವು ತಿಳಿಯಲು ಕಷ್ಟಕರವಾದರೂ ಅವಶ್ಯಕವಾಗಿ ತಿಳಿಯಬೇಕಾಗಿರುವ ವಿಷಯವೆಂದು ಇದರಿಂದ ಸಿದ್ಧವಾಯಿತಲ್ಲವೇ ? ಇಂತಹ ಗಹನವಾದ ವಿಷಯವನ್ನು ತಿಳಿಸಿ ಹೇಳುವ ಉತ್ತಮ ವ್ಯಕ್ತಿಗಳಾದ ಗುರುಗಳು, ನಿನ್ನನ್ನು ಬಿಟ್ಟರೆ ಇನ್ನು ಯಾರು ಸಿಗಬಲ್ಲರು ? ಈ ಪ್ರಶ್ನೆಯೂ ಶ್ರೇಷ್ಠವಾದುದು, ಉತ್ತರ ಕೊಡಲು ನೀನು ಸಮರ್ಥನು. ಆದುದರಿಂದ ಇದಕ್ಕಿಂತ ಶ್ರೇಷ್ಠವಾದ ವರವು ಇನ್ನಾವುದಿದೆ ? ಇದನ್ನೇ ಮೂರನೆಯ ವರವಾಗಿ ನನಗೆ ಕೊಡು.

**ನಾನಾಪ್ರಲೋಭೈರಲುಬ್ಧ ಏವಾಸ್ಯಾಂ ವಕ್ಷ್ಯಮಾಣವಿದ್ಯಾಯಾಂ ಅಧಿಕಾರೀತಿ ಭಾವೇನ ಯಮೋ ಗುಹ್ಯಂ ವರಂ ಯಾಚಮಾನಂ ಪ್ರಲೋಭಯತಿ – ಶತಾಯುಷ ಇತ್ಯಾದಿನಾ ॥**

**ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ**
**ಬಹೂನ್ ಪಶೂನ್ ಹಸ್ತಿಹಿರಣ್ಯಮಶ್ವಾನ್ ।**
**ಭೂಮೇರ್ಮಹದಾಯತನಂ ವೃಣೀಷ್ವ**
**ಸ್ವಯಂ ಚ ಜೀವ ಶರದೋ ಯಾವದಿಚ್ಛಸಿ ॥ 22 ॥**

**ಶತಮಾಯೂಂಷೀತ್ಯರ್ಥಃ । ಶತಾಯುಷ ಇತಿ ಬಹುವ್ರೀಹಿರ್ವಾ । ಪುತ್ರಪೌತ್ರಾನಿತ್ಯಸ್ಯ ವಿಶೇಷಣಮ್ । ಹಸ್ತಿಹಿರಣ್ಯಂ ಹಸ್ತಿನೋ ಹಿರಣ್ಯಂ ಚ ದ್ವಂದ್ವೈಕವದ್ಭಾವಃ । ಭೂಮೇರ್ಮಹ-ದಾಯತನಂ ಅತಿವಿಸ್ತೀರ್ಣಭೂಖಂಡಮ್ । ಯಾವದಿಚ್ಛಸಿ ಯಾವತ್ಕಾಲಂ ಜೀವಿತುಮಿಚ್ಛಸಿ ತಾವತೀಃ ಶರದಶ್ಚ ಶರದೋಽಪಿ ಸ್ವಯಂ ಜೀವ ॥ 22 ॥**

ಲೋಕದಲ್ಲಿ ಒಳ್ಳೆಯ ಧ್ಯೇಯಮಾರ್ಗವನ್ನು ಕ್ರಮಿಸುವವನಿಗೆ ಅನೇಕ ಕ್ಷುದ್ರಪ್ರಲೋಭನಗಳು ಬಂದೊದಗುವುದು ಸ್ವಾಭಾವಿಕ. ಆದರೆ ಅವುಗಳಿಂದ ದಾರಿತಪ್ಪದೆ ತನ್ನ ಮಾರ್ಗದಲ್ಲಿ ಧೃಢವಾದ ಪದನ್ಯಾಸ ಮಾಡುವವನೇ ಬ್ರಹ್ಮವಿದ್ಯೆಯಲ್ಲಿ ಅಕಾರಿಯಾಗುತ್ತಾನೆ. ಉಳಿದವರು ದಾರಿ ನಡೆಯುವಾಗ ಪಕ್ಕದ ಧರ್ಮಶಾಲೆಯಲ್ಲಿ ತಂಗಿ, ಅಲ್ಲಿ ನಡೆಯುವ ಧರ್ಮೋಪದೇಶವನ್ನು ಕೇಳಿ ಮುಂದಕ್ಕೆ ಹೋಗುವ ಪ್ರವಾಸಿಗಳಂತೆ ಇರುತ್ತಾರೆ. ಅವರು ನಿಶ್ಚಿತವಾದ ಜ್ಞಾನವನ್ನು ಪಡೆಯುವುದಿಲ್ಲ, ಈ ಅಭಿಪ್ರಾಯವನ್ನು ಯಮದೇವನು ಮನಸ್ಸಿನಲ್ಲಿಟ್ಟುಕೊಂಡು ನಚಿಕೇತನ ಧ್ಯೇಯನಿಷ್ಠೆಯ ಪರೀಕ್ಷೆಗಾಗಿ ನಾನಾ ಪ್ರಲೋಭಗಳನ್ನು ಒಡ್ಡುತ್ತಾನೆ.

ಯಮಧರ್ಮನ ಬಾಯಿಂದ ಇನ್ನೇನು ಬ್ರಹ್ಮೋಪದೇಶವೇ ಹೊರಡುತ್ತದೆಯೆಂದು ನಿರೀಕ್ಷಿಸುತ್ತಿದ್ದ ನಚಿಕೇತನ ಕಿವಿಗೆ ಈ ಮಾತುಗಳು ಕೇಳಿಬಂದವು.

ಕುಮಾರ ನಚಿಕೇತ ! ಲೋಕದಲ್ಲಿ ಎಲ್ಲರೂ ದೀರ್ಘಾಯುಸ್ಸನ್ನು ಅಪೇಕ್ಷಿಸುತ್ತಾರಲ್ಲವೇ ? ನಾನು ನಿನಗೆ ''ಶತಮಾನಪರ್ಯಂತ ಬಾಳು'' ಎಂದು ವರವನ್ನೇ ಕೊಡುತ್ತೇನೆ. ನೀನು ನೂರು ವರ್ಷದವರೆಗೆ ಬಾಳು. ಇಷ್ಟೇ ಅಲ್ಲ, ನಿನ್ನ ಮಕ್ಕಳು, ಮೊಮ್ಮಕ್ಕಳು, ಎಲ್ಲರಿಗೂ ನೂರು ವರ್ಷ ಆಯಸ್ಸು ಉಂಟಾಗುವಂತೆ ವರ ಕೊಡುತ್ತೇನೆ. ನಿನ್ನ ಮನೆಯಲ್ಲಿ ಬೇಕಾದಷ್ಟು ಹಸುಗಳು, ಆನೆಗಳು, ಕುದುರೆಗಳು, ಭಂಗಾರ, ಬೆಳ್ಳಿ, ಎಲ್ಲಾ ಬಂದು ಸೇರುವಂತೆ ವರ ಕೊಡುತ್ತೇನೆ. ವಿಸ್ತೀರ್ಣವಾದ ಭೂಖಂಡಕ್ಕೆ ನೀನು ರಾಜನಾಗುವಂತೆ ಮಾಡುತ್ತೇನೆ. ನಿನಗೆ ನೂರು ವರ್ಷ ಮಾತ್ರವಲ್ಲ, ಎಷ್ಟು

ವರ್ಷಗಳವರೆಗೆ ಬದುಕಿರಬೇಕೆಂಬ ಇಚ್ಛೆಯಿದೆಯೋ ಅಲ್ಲಿಯವರೆಗೂ ಬದುಕುವಂತೆ ವರ ಕೊಡುತ್ತೇನೆ. ನೀನು ಇಚ್ಛಾಮರಣಿಯಾಗಬಹುದು. ಈ ವರಗಳಲ್ಲಿ ನಿನಗೆ ಯಾವ ವರಬೇಕು ಹೇಳು.

**ಏತತ್ತುಲ್ಯಂ ಯದಿ ಮನ್ಯಸೇ ವರಂ**
**ವೃಣೀಷ್ವ ವಿತ್ತಂ ಚಿರಜೀವಿಕಾಂ ಚ ।**
**ಮಹಾಭೂಮೌ ನಚಿಕೇತಸ್ತ್ವಮೇಧಿ**
**ಕಾಮಾನಾಂ ತ್ವಾ ಕಾಮಭಾಜಂ ಕರೋಮಿ ॥ 23 ॥**

**ಏತತ್ತುಲ್ಯಂ ತ್ವತ್‌ಪ್ರಾರ್ಥಿತವರತುಲ್ಯಂ ವರಂ ಕಂಚನ ಯದಿ ಮನ್ಯಸೇ ತದ್ವಾ ವೃಣೀಷ್ವ । ವಿತ್ತಂ ಚಿರಜೀವಿಕಾಂ ಜೀವನಹೇತುಂ ಚ ವೃಣೀಷ್ವೇತ್ಯಾದರಾತ್ ಪ್ರಾಗುಕ್ತಸ್ಯ ಪುನರುಕ್ತೇಃ । ಹೇ ನಚಿಕೇತಃ ಮಹಾಭೂಮೌ ಪುಣ್ಯಭೂಮೌ ಏಧಿ ಭವ । ಘ್ವಸೋರೇದ್ಧಾವಭ್ಯಾಸಲೋಪಶ್ಚ ಇತ್ಯಸ್ತೇ-ರೂಪಮ್ । ಪುಣ್ಯಭೂಮಿಜನನಂ ವಾ ವೃಣೀಷ್ವ । ಏಧ ವೃದ್ಧಾವಿತ್ಯಸ್ಯ ವಾ ರೂಪಮೇತತ್ ॥ ವರ್ಧಸ್ವೇತ್ಯರ್ಥಃ । ಮಹಾನ್ ಭೂಮಾವಿತಿ ಕ್ವಚಿತ್ಪಾಠಃ । ತದಾ ತು ಏಧಿ ಭವೇತ್ಯರ್ಥಃ । ಕಾಮಾನಾಂ ಕಾಮ್ಯಮಾನಾನಾಂ ಮಧ್ಯೇ ತ್ವಾ ತ್ವಾಂ ಕಾಮಭಾಜಂ ಕಾಮಿತಭಾಜಂ ಕರೋಮಿ ॥ 23 ॥**

ಯಮನು ಮತ್ತೂ ಮುಂದುವರಿಸುತ್ತಿದ್ದಾನೆ.

''ನಚಿಕೇತ, ನಾನು ಕೇಳಿದ ವರಗಳಿಗೆ ಸಮಾನವಾದ ವರವು ನಿನ್ನ ಮನಸ್ಸಿಗೆ ಬಂದಿದ್ದರೆ ಅದನ್ನೇ ಕೇಳು. ಬೇಕಾದಷ್ಟು ಹಣವನ್ನು ಕೇಳು. ಬಹಳಕಾಲದವರೆಗೆ ನಿನ್ನ ಸುಖಜೀವನಕ್ಕೆ ಬೇಕಾಗಿರುವ ಯಾವ ಸಾಧನವನ್ನಾದರೂ ಕೇಳು. ನೀನು ಏನನ್ನಾದರೂ ಕೇಳು. ನಾನು ಅನಾಯಾಸವಾಗಿ ಆದರದಿಂದ ಅದನ್ನು ಕೊಡುತ್ತೇನೆ. ಭೂಮಂಡಲದಲ್ಲಿ ಪುಣ್ಯಕ್ಷೇತ್ರದಲ್ಲಿ ಉತ್ತಮವಾದ ಜನ್ಮವನ್ನು ಕೇಳು. ಅಥವಾ ಭೂಮಿಯಲ್ಲಿ ಮಹಾಪುರುಷನಾಗಿ ಹುಟ್ಟುವಂತೆ ವರಕೇಳು. ಯಾವ ವಿಷಯವನ್ನು ಕೇಳಿದರೂ ಅದನ್ನು ಕೊಟ್ಟು ನಿನ್ನ ಇಚ್ಛಾಪೂರ್ತಿಯನ್ನು ಮಾಡುತ್ತೇನೆ.''

**ತದೇವ ವಿಶದಮಾಹ - ಯೇ ಯ ಇತಿ ।**

**ಯೇ ಯೇ ಕಾಮಾ ದುರ್ಲಭಾ ಮರ್ತ್ಯಲೋಕೇ**
**ಸರ್ವಾನ್ ಕಾಮಾಂಶ್ಛಂದತಃ ಪ್ರಾರ್ಥಯಸ್ವ ।**
**ಇಮಾಃ ರಾಮಾಃ ಸರಥಾಃ ಸತೂರ್ಯಾಃ**
**ನ ಹೀದೃಶಾ ಲಂಭನೀಯಾ ಮನುಷ್ಯೈಃ ॥**
**ಆಭಿರ್ಮತ್ಪ್ರತ್ತಾಭಿಃ ಪರಿಚಾರಯಸ್ವ**
**ನಚಿಕೇತೋ ಮರಣಂ ಮಾಽನುಪ್ರಾಕ್ಷೀಃ ॥ 24 ॥**

**ಮರ್ತ್ಯಲೋಕೇ ಭೂಲೋಕೇ ಮಾನುಷದೇಹೇ ವಾ । ಛಂದತಃ ಸ್ವೇಚ್ಛಾನುಸಾರೇಣೇತ್ಯರ್ಥಃ । ಇಮಾಃ ರೂಪಶೀಲಾದಿಗುಣವತೀಃ । ಮಲ್ಲೋಕಸ್ಥಾ ಇತಿ ವಾ । ರಾಮಾಃ ಸ್ತ್ರಿಯಃ । ರಾಮಾಣಾಂ ವಿಶೇಷಣಂ ಸರಥಾಃ ಸತುರ್ಯಾಃ । ಸೋಪಸ್ಕರಾ ಇತ್ಯರ್ಥಃ । ಈದೃಶೀ ಸಂಪತ್ ಮನುಷ್ಯೈಃ ಲಂಭನೀಯಾ ಪ್ರಾಪ್ಯಾ ನ ಹಿ ಭವತಿ । ತಸ್ಮಾದುಕ್ತಸಂಪದಮೇವ ಪ್ರಾರ್ಥಯಸ್ವೇತ್ಯರ್ಥಃ । ಕಿಂ ಕಾರ್ಯಂ ರಾಮಾಭಿರಿತ್ಯತ ಅಹ – ಆಭಿಃ ರಥಾದ್ಯುಪೇತಾಭಿಃ ಸ್ತ್ರೀಭಿಃ ಮತ್‌ಪ್ರತ್ತಾಭಿಃ ಮಯಾ ದತ್ತಾಭಿಃ ಹೇ ನಚಿಕೇತಃ ಪರಿಚಾರಯಸ್ವ ಪರಿಚರ್ಯಸ್ವ ಸೇವ್ಯೋ ಭವೇತಿ ಯಾವತ್ । ಮರಣಂ ಮರಣವಂತಂ ಮೃತಸ್ಥಭಗವಂತಂ ಮಾನುಪ್ರಾಕ್ಷೀಃ ನೈವ ಪೃಚ್ಛೇತ್ಯರ್ಥಃ । ತಸ್ಯಾತಿಗೋಪ್ಯತ್ವಾದಿತಿ ಭಾವಃ ॥ 24 ॥**

ನಚಿಕೇತನೇ, ಭೂಲೋಕದಲ್ಲಿ ಮನುಷ್ಯ ದೇಹದಲ್ಲಿ ಯಾವ ಯಾವ ಅಭಿಲಾಷೆಗಳನ್ನು ಮನುಷ್ಯ ಪ್ರಯತ್ನದಿಂದ ಈಡೇರಿಸಿಕೊಳ್ಳಲು ಸಾಧ್ಯವಿಲ್ಲವೋ ಅಂತಹ ಇಷ್ಟಾರ್ಥಗಳನ್ನು ನೀನು ಆಲೋಚಿಸಿ ಕೇಳು. ನಿನಗೆ ಆಲೋಚಿಸಲು ಬಾರದಿದ್ದರೆ ನಾನು ಕೆಲವು ವಿಷಯಗಳನ್ನು ಹೇಳುತ್ತೇನೆ, ಕೇಳು. ಇಲ್ಲಿ ನೋಡು, ಸೌಂದರ್ಯ, ಸೌಶೀಲ್ಯಾದಿ ಗುಣಮಣಿಗಳಿಂದ ಪಂಡಿತರಾದ ಈ ಮಂದಗಮನೆಯರು ನನ್ನ ಲೋಕದಲ್ಲಿ ಮಾತ್ರವೇ ಸಿಗುತ್ತಾರೆ. ಇದರಲ್ಲಿ ನೀನು ಬೇಕಾದವರನ್ನು ಆರಿಸಿಕೋ. ಅಥವಾ ಎಲ್ಲರನ್ನೂ ಸ್ವೀಕರಿಸು. ಇವರಲ್ಲಿ ಪ್ರತಿಯೊಬ್ಬರಿಗೂ ಉತ್ತಮ ವಸ್ತ್ರಾಲಂಕಾರಗಳೇ ಅಲ್ಲದೆ ಒಬ್ಬೊಬ್ಬರಿಗೂ ಒಂದೊಂದು ರಥ ಅವರವರು ನುಡಿಸುವ ವಾದ್ಯ ಇವುಗಳೂ ಇವೆ. ಉಳಿದ ಎಲ್ಲಾ ಉಪಸ್ಕರಗಳೂ ಇವೆ. ಇಂತಹ ಸಂಪತ್ತು ಮನುಷ್ಯ ಲೋಕದಲ್ಲಿ, ಮನುಷ್ಯ ದೇಹದಲ್ಲಿ ಯಾರಿಗೂ ದೊರೆಯುವುದಿಲ್ಲ. ಈ ಸಂಪತ್ತನ್ನು ಬೇಡಿದರೆ ನಾನು ಅದೆಲ್ಲವನ್ನೂ ನಿನಗೆ ಕೊಡಲು ಸಿದ್ಧನಿರುವೆನು. ಈ ಸುಂದರಿಯರು ನಿನಗೆ ವಿಧೇಯರಾಗಿ ಎಲ್ಲಾ ವಿಧದಲ್ಲಿಯೂ ನಿನ್ನ ಸೇವೆಯನ್ನು ಮಾಡಿ ಆನಂದಗೊಳಿಸುವರು. ಹೀಗೆ ನಿನಗೆ ಬೇಕಾದ ಯಾವ ವರವನ್ನಾದರೂ ಕೇಳಬಹುದು. ಆದರೆ ಮೃತಜೀವನಿಗೆ ಪ್ರೇರಕನಾದ ಭಗವಂತನು ಯಾರು ? ಮುಕ್ತಚೇತನನಲ್ಲಿ ನಿಯಾಮಕನಾದ ಪರಮಾತ್ಮ ಸ್ವರೂಪವೇನು ? ಎಂಬ ವಿಷಯವನ್ನು ಮಾತ್ರ ಕೇಳಬೇಡ. ಅದು ಬಹಳ ರಹಸ್ಯವಾದುದು. ಅದನ್ನು ನಿನಗೆ ಹೇಳಲಾರೆ.

ನಚಿಕೇತನು ಯಮನ ಮಾತುಗಳನ್ನು ಸಾವಧಾನವಾಗಿ ಆಲಿಸಿದನು. ಈಗ ತನ್ನ ಪರೀಕ್ಷೆ ನಡೆಯುತ್ತಿದೆ. ಇದರಲ್ಲಿ ಈ ಲಘುಪರೀಕ್ಷೆಯಲ್ಲಿ ಉತ್ತೀರ್ಣನಾದರೆ ಮಾತ್ರವೇ ಮುಂದಿನ ತರಗತಿಗೆ ಪ್ರವೇಶ. ಅಲ್ಲಿ ಬ್ರಹ್ಮಜ್ಞಾನದ ಪಾಠ, ಇಲ್ಲವಾದರೆ ಸಂಸಾರ ಪ್ರವಾಹದಲ್ಲಿ ತೊಳಲಾಟವು ಕಟ್ಟಿಟ್ಟಿದ್ದೇ. ಆದುದರಿಂದ ಯಮನ ಪ್ರಲೋಭನೆಗಳಲ್ಲಿ ಒಂದೊಂದನ್ನೂ ಅಸಾರ, ಅನುಪಯುಕ್ತ, ಅನಪೇಕ್ಷಿತವೆಂದು ಅವನ್ನು ಸಕಾರಣವಾಗಿ ನಿರಾಕರಿಸಿ, ಬ್ರಹ್ಮಜ್ಞಾನವನ್ನೇ ಬೇಡಿದನು. ಮೃತಜೀವನಲ್ಲಿ ಯಾರು ನಿಯಾಮಕರು ? ಮುಕ್ತಜೀವನಿಗೆ ಯಾರು ಪ್ರೇರಕರು ? ಈ ಪ್ರಶ್ನೆಗೆ ಉತ್ತರ ಬೇಕಾಗಿದೆ. ಆ ಪರಮಾತ್ಮನ ಸ್ವರೂಪವನ್ನು ತಿಳಿದು ಅವನಲ್ಲಿ ಭಕ್ತಿಮಾಡಿ ನಾನು ಉದ್ಧಾರಹೊಂದಬೇಕಾಗಿದೆ. ನನ್ನೊಂದಿಗೆ ಅನೇಕ ಯೋಗ್ಯ ಜೀವರನ್ನೂ ಉದ್ಧಾರಮಾಡಬೇಕಾಗಿದೆ ಎಂದಾಲೋಚಿಸಿದ ನಚಿಕೇತನು ಹೇಳತೊಡಗುತ್ತಾನೆ.

**ಏವಂ ಪ್ರಲೋಭಿತೋ ನಚಿಕೇತಾಃ ಶತಾಯುಷ ಇತ್ಯಾದೇರುತ್ತರಮಾಹ ಶ್ವ ಇತ್ಯಾದಿನಾ ।**

**ಶ್ವೋಽಭಾವಾ ಮರ್ತ್ಯಸ್ಯ ಯದಂತಕೈತತ್**
**ಸರ್ವೇಂದ್ರಿಯಾಣಾಂ ಜರಯಂತಿ ತೇಜಃ ।**

ಅಪಿ ಸರ್ವಂ ಜೀವಿತಮಲ್ಪಮೇವ
ತವೈವ ವಾಹಾಸ್ತವ ನೃತ್ತಗೀತಮ್ ॥ 25 ॥

ಹೇ ಅಂತಕ ಮೃತ್ಯೋ, ಮರ್ತ್ಯಸ್ಯ ಮನುಷ್ಯಸ್ಯ ಯದೇತತ್ ಯ ಏತೇ ಪುತ್ರಾದಯಃ ವ್ಯತ್ಯಯಾತ್, ಭಾವಾಃ ತೇ ಶ್ವಃ ಪರೇದ್ಯುಃ ಅಭಾವಾಃ ಭವಂತೀತಿ ಭಾವಾಃ ನ ಭಾವಾಃ ಅಭಾವಾ ಅಸಂತಃ ಅಸ್ಥಿರಾ ಇತಿ ಯಾವತ್, ತದ್ರಕ್ಷಣಾರ್ಥಾಯಾಸೇನ ಸರ್ವೇಂದ್ರಿಯಾಣಾಂ ತೇಜೋ ವೀರ್ಯಂ ಜರಯಂತಿ ಅಪಗಮಯಂತಿ ಚ । ಅತಃ ಕಿಂ ಪುತ್ರಪೌತ್ರಾದಿಭಿರಿತಿ ಭಾವಃ । ಯದಪಿ ಸ್ವಯಂ ಚ ಜೀವೇತ್ಯಾದ್ಯುಕ್ತಂ ತಸ್ಯ ಉತ್ತರಮಾಹ- ಅಪೀತಿ । ಸರ್ವಮಪಿ ಜೀವಿತಮಲ್ಪಮೇವ ಉತ್ತರಾವ-ಧ್ಯುಪೇತಮೇವ । ನ ಹಿ ಮುಕ್ತಾವಿವ ಉತ್ತರಾವಧಿಶೂನ್ಯಮಾಯುರಸ್ತೀತಿ ಭಾವಃ । ಇಮಾ ರಾಮಾ ಇತ್ಯಸ್ಯೋತ್ತರಂ- ತವೈವೇತಿ । ವಾಹಾಃ ರಥಾದಿವಾಹನಾನಿ ತವೈವ ಸಂತು । ನೃತ್ತಗೀತಂ, ದ್ವಂದ್ವೈ-ಕವದ್ಭಾವಃ, ರಾಮಾಭಿಃ ಕ್ರಿಯಮಾಣಂ ತವಾಸ್ತು ॥ 25 ॥

ಗುರುದೇವ ! ನೀನು ಶತಮಾನಜೀವಿಗಳಾದ ಪುತ್ರ ಪೌತ್ರರನ್ನು ಬೇಡು ಎಂದೆ. ನನಗೂ ನೂರು ವರ್ಷ ಆಯುಸ್ಸು ಕೊಡುತ್ತೇನೆ, ಅಥವಾ ಇಚ್ಛಾ ಮರಣಿಯಾಗುವಂತೆ ವರ ಕೊಡುತ್ತೇನೆ ಎಂದೆ. ಇದು ಯಾವುದೂ ನನಗೆ ಬೇಡ. ಮಕ್ಕಳು-ಮೊಮ್ಮಕ್ಕಳು ಎಲ್ಲರೂ ನಶ್ವರರೇ ಅಲ್ಲವೇ ? ಅವರೆಲ್ಲರೂ ಇಂದು ಇದ್ದು ನಾಳೆ ಕಣ್ಮರೆಯಾಗುವವರೇ ಅಲ್ಲವೇ ? ಅವರಿಂದ ನನಗೆ ಸುಖವೇ ಆಗುತ್ತದೆ ಎಂದು ಹೇಳಲೂ ಸಾಧ್ಯವಿಲ್ಲ. ಅವರನ್ನು ರಕ್ಷಿಸುವ ಪ್ರಯತ್ನದಲ್ಲಿ ನನ್ನ ಬುದ್ಧಿ, ಇಂದ್ರಿಯಗಳು ಮತ್ತು ದೇಹದ ಬಲವೆಲ್ಲಾ ಕುಗ್ಗಿ ಹೋಗುತ್ತದೆ. ನನ್ನ ಎಲ್ಲ ಅಂಗಾಂಗಗಳು ಸಂಸಾರಭಾರವನ್ನು ಹೊತ್ತು ಮುಪ್ಪಡರಿಸಿಹೋಗುತ್ತವೆ. ಇಂದ್ರಿಯಗಳ ತೇಜಸ್ಸು ಕಡಿಮೆಯಾಗುತ್ತದೆ. ನನಗೆ ಮಾತ್ರವೇ ನೀನು ನೂರು ವರ್ಷ ಆಯಸ್ಸು ಕೊಟ್ಟರೂ ಇಚ್ಛಾಮರಣಿಯಾಗುವಂತೆ ವರಕೊಟ್ಟರೂ ಎಂದಾದರೂ ಸಾಯಲೇಬೇಕಲ್ಲವೇ ? ಉತ್ತರಾವಧಿ ಯಿಲ್ಲದ ಅನಂತಕಾಲ ಜೀವನವನ್ನು ನೀನು ಕೊಡಲಾರೆ. ಹಾಗೆ ಅನಂತಕಾಲದಲ್ಲಿ ಸುಖವಾಗಿರಬೇಕಾದರೆ ಮುಕ್ತಿಯನ್ನೇ ಪಡೆಯಬೇಕೆಂದು ಬಲ್ಲವರು ಹೇಳುತ್ತಾರೆ. ಈ ಆನೆ, ಕುದುರೆಗಳು, ನೃತ್ಯ ಸಂಗೀತಾದಿಗಳಿಂದ ಮನರಂಜನೆ ಮಾಡುವ ಸುಂದರಿಯರು ಇವರಿಂದಲೂ ನನಗೇನೂ ಉಪಯೋಗವಿಲ್ಲ. ಇವರು ಮಾಡುವ ನೃತ್ಯ ಸಂಗೀತಾದಿಗಳು ನಿನಗೆ ಇರಲಿ ! ನನಗೇನೂ ಬೇಕಾಗಿಲ್ಲ. ಇವರ ರಕ್ಷಣೆಯ ಆಯಾಸದಿಂದ ನನಗೆ ಇವರು ದುಃಖಕ್ಕೆ ಮಾತ್ರ ಕಾರಣರಾಗುತ್ತಾರೆ.

ವೃಣೀಷ್ವ ವಿತ್ತಮಿತ್ಯಾದೇರುತ್ತರಂ - ನ ವಿತ್ತೇನೇತಿ ।

ನ ವಿತ್ತೇನ ತರ್ಪಣೀಯೋ ಮನುಷ್ಯಃ
ಲಪ್ಸ್ಯಾಮಹೇ ವಿತ್ತಮದ್ರಾಕ್ಷ್ಮ ಚೇತ್ ತ್ವಾಮ್ ।
ಜೀವಿಷ್ಯಾಮೋ ಯಾವದೀಶಿಷ್ಯಸಿ ತ್ವಂ
ವರಸ್ತು ಮೇ ವರಣೀಯಃ ಸ ಏವ ॥ 26 ॥

ವಿತ್ತೇನ ಮನುಷ್ಯಃ ನ ತರ್ಪಣೀಯೋ ನಾಪ್ಯಾಯನೀಯಃ । ಕುತ ಇತ್ಯತಃ ತ್ವಾದೃಶೇ ದೇವೇ ದೃಷ್ಟೇ ವಿತ್ತಾಯುಷೋರನುಷಂಗಸಿದ್ಧತ್ವಾನ್ನ ತೇ ಪೃಥಕ್ ಪ್ರಾರ್ಥನೀಯೇತ್ಯಾಹ - ಲಪ್ಸ್ಯಾಮಹ ಇತಿ । ತ್ವಾಂ ಚೇದದ್ರಾಕ್ಷ್ಮ ದೃಷ್ಟವಂತಃ ಸ್ಮಃ ತರ್ಹಿ ವಿತ್ತಂ ಲಪ್ಸ್ಯಾಮಹೇ । ತ್ವಂ ಯಾವದೀಶಿಷ್ಯಸಿ, ಈಶ ಐಶ್ವರ್ಯೇ, ಮಮ ಯಾವದಾಯುಷಃ ಈಶ್ವರೋ ಭವಿಷ್ಯಸಿ ತಾವತ್ಕಾಲಂ ಜೀವಿಷ್ಯಾಮೋ ವಯಮ್ । ತವಾಯುಷಃ ಕರ್ತೃತ್ವಾದಿತಿ ಭಾವಃ । ಪರಸ್ಮೈಪದಂ ಛಾಂದಸಮ್ । ತರ್ಹಿ ಕಂ ಕಾಮಂ ಯಾಚಸ ಇತ್ಯತ ಆಹ- ವರಸ್ತ್ವಿತಿ । ಸ ಏವ ಪ್ರಾಗ್ ಯಾಚಿತ ಏವೇತ್ಯರ್ಥಃ । ತುಶಬ್ದಃ ಅಸ್ಯ ವರಸ್ಯ ಸರ್ವಾತಿಶಯದ್ಯೋತಕಃ ॥ 26 ॥

ಯಮದೇವ ! ನೀನು ನನ್ನನ್ನು ಕುರಿತು ಬೇಕಾದಷ್ಟು ಹಣವನ್ನು ಬೇಡು ಕೊಡುತ್ತೇನೆ ಎಂದೆಯಲ್ಲವೆ ? ಹಣಕೊಟ್ಟು ಮನುಷ್ಯನನ್ನು ತೃಪ್ತಿ ಗೊಳಿಸಲು ಸಾಧ್ಯವಿಲ್ಲ. ಸಾಮಾನ್ಯರು ಕೆಲವರು ತೃಪ್ತಿ ಹೊಂದಬಹುದಾದರೂ ನಾನು ಹಣದಿಂದ ತೃಪ್ತಿಹೊಂದುವವನಲ್ಲ. ನಿನ್ನ ದರ್ಶನವಾದರೆ ಸಾಕು. ಐಶ್ವರ್ಯವು ತಾನಾಗಿಯೇ ಬರುತ್ತದೆ. ಅದಕ್ಕಾಗಿ ವರವನ್ನೇ ಬೇಡಬೇಕೆ ? ನನಗೂ ಬೇಕಾದಷ್ಟು ಆಯಸ್ಸನ್ನು ಕೊಡುತ್ತೇನೆ. ಇಚ್ಛಾಮರಣಿಯಾಗುವಂತೆ ಮಾಡುತ್ತೇನೆ ? ? ಎಂದೆಯಲ್ಲವೆ ? ನನಗೆ ಅದು ಬೇಡ. ಎಷ್ಟು ಆಯಸ್ಸನ್ನು ಕೊಟ್ಟರೂ ಅದಕ್ಕೆ ಕೊನೆಯಿದ್ದೇ ಇದೆ. ನೀನು ಎಷ್ಟು ಸಮಯದವರೆಗೆ ಪ್ರಾಣಿಯು ಬದುಕಿರಬೇಕೆಂದು ಸಂಕಲ್ಪಿಸಿರುತ್ತೀಯೋ ಅದರ ಮೇಲೆ ಒಂದು ಕ್ಷಣವೂ ಯಾವ ಪ್ರಾಣಿಯೂ ಬದುಕಿರಲಾರದು. ಹಾಗಾದರೆ ನಿನಗೆ ಮತ್ತಾವ ವರ ಬೇಕು ಎಂದು ಕೇಳುವೆಯೋ ? ನನಗೆ ಬೇಕಾದ ವರವು ಅದೇ. ಅದು ಎಂದರೆ ''ಸತ್ತ ಮೇಲೆ ಜೀವನು ಏನಾಗುವನು ? ಮುಕ್ತನಾದ ಮೇಲೆ ಅವನ ಸ್ಥಿತಿ ಏನು'' ಈ ಪ್ರಶ್ನೆಗೆ ಉತ್ತರ ಹೇಳು. ಉಪದೇಶಿಸು. ಇದೇ ನನಗೆ ಬೇಕಾದ ವರ.

ಲಪ್ಸ್ಯಾಮಹ ಇತ್ಯಾದಿನೋಕ್ತಮೇವ ವಿವೃಣೋತಿ- ಅಜೀರ್ಯತಾಮ್ ಇತಿ ।

ಅಜೀರ್ಯತಾಮಮೃತಾನಾಮುಪೇತ್ಯ
ಜೀರ್ಯನ್ ಮರ್ತ್ಯಃ ಕ್ವಾಧಃಸ್ಥಃ ಪ್ರಜಾನನ್ ।
ಅಭಿಧ್ಯಾಯನ್ ವರ್ಣರತಿಪ್ರಮೋದಾನ್
ಅತಿದೀರ್ಘೇ ಜೀವಿತೇ ಕೋ ರಮೇತ ॥ 27 ॥

ಹೇ ಪ್ರಜಾನನ್ ವಿದ್ವನ್, ಅಜೀರ್ಯತಾಂ, ಜೄಷ್ ವಯೋಹಾನೌ, ಉಪಲಕ್ಷಣಂ, ವಯಃ ಪ್ರಭೃತಿ ಸಂಪತ್ತಿಮತಾಮಮೃತಾನಾಂ ದೇವಾನಾಂ, ಸಕಾಶಾದಿತಿ ಶೇಷಃ, ಉಪೇತ್ಯ ಪ್ರಾಪ್ಯ ಜೀರ್ಯನ್ ಮರ್ತ್ಯಃ ಕ್ವ ಅಧಃಸ್ಥೋ ಪ್ರಕೃಷ್ಟಶ್ಚ ಕ್ವ ಕುತ್ರ ? ನ ಕುತ್ರಾಪಿ । ಕಿಂತು ಮಹಾನೇವ ಅಜೀರ್ಯನ್ನೇವಾಸ್ತ ಇತ್ಯರ್ಥಃ । ದೀರ್ಘಜೀವನಸ್ಯ ದುಃಖಹೇತುತ್ವಾಚ್ಚ ನ ತತ್ ಪ್ರಾರ್ಥ್ಯಮಿತ್ಯಾಹ, ಅಭಿಧ್ಯಾಯನ್ನಿತಿ । ವರ್ಣರತಿಪ್ರಮೋದಾನ್ ವರ್ಣೋ ಬ್ರಾಹ್ಮಣಾದಿಃ ದೇಹಗತಶೋಭಾವಿಶೇಷೋ ವಾ, ರತಿಃ ವಿಷಯಾನುಭವಜಂ ಸುಖಮ್ । ಪ್ರಮೋದಃ ಪ್ರಕೃಷ್ಟವಿಷಯಾನುಭವಜಂ ಸುಖಮ್ । ಏತಾನ್

**ಪೂರ್ವಾನುಭೂತಾನ್ ವಿಷಯಾನ್ ಇದಾನೀಂ ನಿವೃತ್ತಾನ್ ಅಭಿಧ್ಯಾಯನ್ ಸ್ಮರನ್ ಅತಿದೀರ್ಘೇ ಜೀವಿತೇ ಕೋ ರಮೇತ ನ ಕೋಽಪೀತ್ಯರ್ಥಃ । ವಯೋಽಧಿಕತ್ವೇ ಜರಾದ್ಯಾಪತ್ತ್ಯಾ ಭೋಗಶಕ್ತೇ-ರಭಾವಾತ್ । ಪ್ರತ್ಯುತ ಕ್ಲೇಶ ಏವ ಭವೇದಿತಿ ಭಾವಃ ॥ 27 ॥**

ದೇವ ! ನೀನು ದೊಡ್ಡ ಜ್ಞಾನಿಯಾಗಿದ್ದಿ. ನಿನಗೆ ತಿಳಿಯದ ವಿಷಯ ಯಾವುದಿದೆ ? ನೀನು ದೇವತಾವರ್ಗಕ್ಕೆ ಸೇರಿದವನು. ದೇವತೆಗಳಿಗೆ ಮುಪ್ಪು ಇಲ್ಲ, ಅಲ್ಲವೇ ? ಮಹಾತ್ಮನಾದ ನಿನ್ನಂತಹ ದೇವತೆಯ ಬಳಿಗೆ ಬಂದವರು ಮುಪ್ಪು ಮತ್ತು ಮರಣಸ್ವಭಾವದ ಮನುಷ್ಯನಾದರೂ ಅವರೂ ಮಹಾತ್ಮರಾಗಿ ಮುಪ್ಪನ್ನು ಗೆಲ್ಲಲೇಬೇಕಲ್ಲವೇ ? ಇದನ್ನು ನಾನು ನಿನ್ನಲ್ಲಿ ಬೇಡಲೇ ? ಅದೂ ಅಲ್ಲದೆ ನಾನು ಇದನ್ನು ಸರ್ವಥಾ ಬೇಡುವುದಿಲ್ಲ. ಏಕೆಂದರೆ ಯಾವ ಲೋಕದಲ್ಲಿಯೇ ಆಗಲಿ ದೀರ್ಘಜೀವನವೂ ಅಂದರೆ ಬಹುಕಾಲ ಬದುಕಿರುವದು ದುಃಖಕರವಾಗಿಯೇ ಇರುತ್ತದೆ. ಮನುಷ್ಯ ದೇಹದಲ್ಲಿ ಬಹುಕಾಲ ಬದುಕಿದ್ದರೆ ಬಹು ದುಃಖ ಉಂಟಾಗುತ್ತದೆ. ಅಯ್ಯೋ, ಬ್ರಾಹ್ಮಣನಾದ ನಾನು ಕೆಟ್ಟ ಕೆಲಸ ಮಾಡಿದ್ದೇನಲ್ಲಾ. ಈಗ ಸತ್ಕರ್ಮ ಮಾಡಲು ಸಾಧ್ಯವಾಗುವುದಿಲ್ಲವಲ್ಲಾ ? ಎಂಬ ದುಃಖ ಮೊದಲು ಮೈಯಲ್ಲಿದ್ದ ಕಾಂತಿ ಈಗ ಇಲ್ಲವಲ್ಲ ಎಂಬ ದುಃಖ, ಹಿಂದಿನಂತೆ ಸುಖಾನುಭವ ಮಾಡಲು ಸಾಧ್ಯವಾಗುವುದಿಲ್ಲವಲ್ಲಾ ಎಂಬ ದುಃಖ, ಹಾಗೂ ವಿಷಯಾನುಭವ ಮಾಡಿದರೂ ಹಿಂದಿನಂತೆ ಉತ್ಕೃಷ್ಟ ಸುಖವು ಉಂಟಾಗುವುದಿಲ್ಲವಲ್ಲ ಎಂಬ ದುಃಖ. ಈ ರೀತಿ ನೂರಾರು ದುಃಖಗಳು. ಈ ವಿಷಯಗಳನ್ನೆಲ್ಲಾ ನೆನೆಸಿಕೊಂಡು ಕೊರಗುತ್ತಾ ಕರಗುತ್ತಾ ದೀರ್ಘಜೀವನ ಮಾಡಲು ಯಾರು ಬಯಸುತ್ತಾರೆ ? ಆಯಸ್ಸು ಹೆಚ್ಚಾದರೆ ಮುಪ್ಪಿನ ಅವಧಿಹೆಚ್ಚಾಗಿ ಆಗ ಭೋಗಶಕ್ತಿಯು ಕುಗ್ಗಿರುವುದರಿಂದ ಹೆಚ್ಚು ಕಾಲ ದುಃಖಿಸುತ್ತಾ ಇರಬೇಕಾಗುತ್ತದೆ. ಇದು ಯಾರಿಗೆ ಬೇಕಾಗಿದೆ ?

**ತರ್ಹಿ ಕಿಮಾಕೂತಂ ತವೇತ್ಯತ ಆಹ- ಯಸ್ಮಿನ್ನಿತಿ ।**

**ಯಸ್ಮಿನ್ನಿದಂ ವಿಚಕಿತ್ಸಂತಿ ಮೃತ್ಯೋ**
**ಸಾಂಪರಾಯೇ ಮಹತಿ ಬ್ರೂಹಿ ನಸ್ತತ್ ।**
**ಯೋಽಯಂ ವರೋ ಗೂಢಮನುಪ್ರವಿಷ್ಟೋ**
**ನಾನ್ಯಂ ತಸ್ಮಾತ್ ನಚಿಕೇತಾ ವೃಣೀತೇ ॥ 28 ॥**

**ಯಸ್ಮಿನ್ ವಿಷಯೇ ಇದಂ, ಇತ್ಥಂ ಪ್ರೇತಪ್ರೇರಕತಯಾ ಅಸ್ತಿ ನ ವೇತಿ ವಿಚಿಕಿತ್ಸಂತಿ ಸಂದಿಹತೇ ಜನಾಃ ತತ್ ತು ತದೇವ ಪ್ರೇತಪ್ರೇರಕಸ್ವರೂಪಂ, ಹೇ ಮೃತ್ಯೋ ಮಹತಿ ಸಾಂಪರಾಯೇ ಮುಕ್ತೌ, ನಿಮಿತ್ತ-ಸಪ್ತಮೀ, ಮೋಕ್ಷಾರ್ಥಂ ನೋಽಸ್ಮಭ್ಯಂ ಬ್ರೂಹಿ ಉಪದಿಶ । ಸಾಂಪರಾಯಪದಸ್ಯ ಶ್ರೇಯೋಮಾತ್ರ-ಸಾಧಾರಣ್ಯಾತ್ ಮುಕ್ತ್ಯರ್ಥತ್ವಲಾಭಾಯ ಮಹತೀತ್ಯುಕ್ತಮ್ । ಯೋ ಯಂ ವರಃ ಪ್ರೇತಪ್ರೇರಕ ಸ್ವರೂಪೋಕ್ತಿಪ್ರಾರ್ಥನರೂಪಃ ಗೂಢಂ ಗೂಢತ್ವಂ ಗೋಪ್ಯತಾಮನುಪ್ರವಿಷ್ಟಃ ಪ್ರಾಪ್ತಃ ತಸ್ಮಾತ್ ವರಾದನ್ಯಂ ವರಂ ನಚಿಕೇತಾ ನ ವೃಣೀತ ಇತಿ ಸ್ವಾತ್ಮಾನಮೇವ ನಾಮನಿರ್ದೇಶೇನಾಹ ॥ 28 ॥**

ಹಾಗಾದರೆ ನಿನ್ನ ಅಭಿಪ್ರಾಯವೇನು ಎಂದು ಕೇಳುತ್ತೀಯೋ ? ಕೇಳು. ಸತ್ತಮೇಲೆ ಮತ್ತು ಮುಕ್ತನಾದ ಮೇಲೆ ಜೀವನಿಗೆ ಪ್ರೇರಕನಾಗಿ ಭಗವಂತನು ಇರುತ್ತಾನೋ ಇಲ್ಲವೋ ಎಂದು ಜನಗಳು ಸಂದೇಹ ಪಡುತ್ತಾರೆ. ವಿಮರ್ಶಿಸುತ್ತಾರೆ. ನನಗೆ ಆ ವಿಷಯವನ್ನೇ ಹೇಳು. ಮೋಕ್ಷವಾಗಬೇಕಾದರೆ ಇದರ ಜ್ಞಾನವು ಅವಶ್ಯವಾಗಿ ಬೇಕಾಗಿದೆಯೆಂದು ನಾನು ಕೇಳಿದ್ದೇನೆ. ನನಗೆ ಬೇಡವಾದುದ್ದನ್ನೆಲ್ಲಾ ಮುಂದೊಡ್ಡಿ ಬೇಕಾದ ವಿಷಯವನ್ನು ಮುಚ್ಚಿಟ್ಟು ನನ್ನನ್ನು ಕಳುಹಿಸಬೇಡ. ಈ ನಚಿಕೇತನು ಅದೇ ವರವನ್ನು ಬೇಡುತ್ತಾನೆ. ಮತ್ತಾವುದೂ ಇವನಿಗೆ ಬೇಕಾಗಿಲ್ಲ.

ಇಲ್ಲಿಗೆ ಕಾಠಕೋಪನಿಷತ್ತಿನ ಪ್ರಥಮಾಧ್ಯಾಯದ ಪ್ರಥಮವಲ್ಲಿಯು ಸಮಾಪ್ತವಾಯಿತು.



## ಪ್ರಥಮಾಧ್ಯಾಯ ದ್ವಿತೀಯವಲ್ಲೀ

**ದೀಯಮಾನಮಪಿ ಪುತ್ರಾದಿಕಾಮಂ ಹಿತ್ವಾ ಬ್ರಹ್ಮವಿದ್ಯಾಂ ಯಾಚಮಾನಃ ತ್ವಂ ಪ್ರಶಸ್ತೋऽಸೀತಿ ತಂ 'ಸ ತ್ವಂ ಪ್ರಿಯಾನ್' ಇತ್ಯಾದಿನಾ ಪ್ರಶಂಸಿತುಂ ಬ್ರಹ್ಮವಿದ್ಯಾಯ ಮೋಚಕತ್ವಂ, ಪುತ್ರಾದಿಕಾಮಸ್ಯ ಬಂಧಕತ್ವಂ, ತದ್ಯಾಚೋಃ ಸ್ತುತಿನಿಂದೇ, ಜ್ಞಾಜ್ಞಯೋ! ಸ್ಥಿತೀ ಚ ಸಾರ್ಧಮಂತ್ರದ್ವಯೇನಾಹ ಯಮಃ ಅನ್ಯದಿತ್ಯಾದಿನಾ ॥**

ಯಮಧರ್ಮರಾಜನು ಪುತ್ರ, ಪಶು, ಕಾಮಿನೀ ಮುಂತಾದ ಅನೇಕ ಐಹಿಕ ಸಂಪತ್ತುಗಳನ್ನು ಕೊಡುವೆನೆಂದನು. ಆದರೆ ನಚಿಕೇತನು ಅವುಗಳಲ್ಲಿ ತನಗೆ ಯಾವುದೂ ಬೇಡವೆಂದೂ, ಬ್ರಹ್ಮವಿದ್ಯೆಯೇ ಬೇಕೆಂದೂ ಪಟ್ಟು ಹಿಡಿದನು. ಅವನ ಬ್ರಹ್ಮವಿದ್ಯಾಸಕ್ತಿಯನ್ನು ನೋಡಿ ಯಮದೇವನಿಗೆ ತುಂಬಾ ಸಂತೋಷವಾಯಿತು. ಅವನನ್ನು ತುಂಬಾ ಹೊಗಳಬೇಕೆಂದು ತೋರಿತು. ಸದಾಗ್ರಹದಿಂದ ಕೂಡಿದ ಸಚ್ಛಿಷ್ಯನನ್ನು ಹೊಗಳಬೇಕೆಂದು ತೋರುವುದು ಸದ್ಗುರುಗಳ ಸ್ವಭಾವವೇ ಅಲ್ಲವೇ ? (1) ಆದರೆ ಬ್ರಹ್ಮವಿದ್ಯಾಕಾಮಿಯನ್ನು ಏಕೆ ಹೊಗಳಬೇಕು ? 2) ಪುತ್ರಾದಿ ಫಲಾಭಿಲಾಷೆಯನ್ನು ಏಕೆ ಹೊಗಳಬಾರದು ? (3) ಬ್ರಹ್ಮಜ್ಞಾನಿಯು ಅಥವಾ ಬ್ರಹ್ಮಜ್ಞಾನಾಪೇಕ್ಷಿಯು ಹೇಗಿರುತ್ತಾನೆ ? (4) ಅಜ್ಞಾನಿಯ ಸ್ಥಿತಿಯು ಹೇಗಿರುತ್ತದೆ ? ಎಂಬ ನಾಲ್ಕು ಪ್ರಶ್ನೆಗಳು ಮೊದಲು ಹುಟ್ಟುತ್ತವೆಯಲ್ಲವೇ ? ಈ ಪ್ರಶ್ನೆಗಳಿಗೆ ಉತ್ತರ ಹೇಳದ ಹೊರತು ನಚಿಕೇತನನ್ನು ಸುಮ್ಮನೆ ಹೊಗಳಿದರೆ ಅದು ಸಮಂಜಸವಾಗಲಾರದು. ಬ್ರಹ್ಮಜಿಜ್ಞಾಸುಗಳ ಮಾನಸದಲ್ಲಿ ಉದ್ಭವಿಸಬಹುದಾದ ಈ ಪ್ರಶ್ನೆಗಳ ಉತ್ತರವನ್ನು ಯಮಧರ್ಮರಾಜನು ತಾನೇ ಸ್ವತಃ ಹೇಳುತ್ತಿದ್ದಾನೆ.

**ಅನ್ಯತ್ ಶ್ರೇಯೋ ಅನ್ಯದುತೇವ ಪ್ರೇಯಃ**
**ತೇ ಉಭೇ ನಾನಾರ್ಥೇ ಪುರುಷಂ ಸಿನೀತಃ ।**
**ತಯೋಃ ಶ್ರೇಯಃ ಆದದಾನಸ್ಯ ಸಾಧು ಭವತಿ**
**ಹೀಯತೇऽರ್ಥಾತ್ ಯ ಉ ಪ್ರೇಯೋ ವೃಣೀತೇ ॥ 1 ॥**

**ಶ್ರೇಯಃ ಪ್ರಶಸ್ತತಮಂ ಬ್ರಹ್ಮಜ್ಞಾನಂ ಅನ್ಯತ್, ಪ್ರೇಯಃ ಉತ ಪ್ರಿಯತಮಂ ದಾರಾಪತ್ಯಾದಿ-ಕಾಮ್ಯಮಾನಂ ವಸ್ತ್ವಪಿ ಅನ್ಯದಿವ ಇತಿ ಚ ಜಾನತಾಂ ದಾರಾಪತ್ಯಾದಿರೂಪಪ್ರೇಯಸೋऽಪಿ ಸದ್ಧರ್ಮ-**

**ದ್ವಾರಾ ಶ್ರೇಯಸ್ತ್ವಮೇವೇತಿ ಸೂಚನಾಯ ಇವಶಬ್ದಃ । ದ್ವಯೋರನ್ಯೋನ್ಯತ್ವಂ ನಾಮ ಕಿಂ ಇತ್ಯತಃ ಐಹಿಕ-ಆಮುಷ್ಮಿಕಸುಖಹೇತುತ್ವಂ ತದಿತ್ಯಾಹ- ತೇ ಉಭೇ ಇತಿ । ತೇ ಉಭೇ ನಾನಾರ್ಥೇ ಭಿನ್ನ-ಪ್ರಯೋಜನಕೇ ಪುರುಷಂ ದೇಹಿನಂ ಸಿನೀತಃ ಬಧ್ನೀತಃ । ಷಿಞ ಬಂಧನೇ ಇತಿ ಧಾತೋಃ । ಪುರುಷಸ್ಯ ದ್ವೇ ಪ್ರಸಕ್ತೇ ಇತ್ಯರ್ಥಃ । ತತಃ ಕಿಮಿತ್ಯತ ಆಹ- ತಯೋರಿತಿ । ಶ್ರೇಯಃಪ್ರೇಯಸೋರ್ಮಧ್ಯೇ ಶ್ರೇಯೋ ಬ್ರಹ್ಮವಿದ್ಯಾಂ ಆದದಾನಸ್ಯ ಉಪಾಸೀನಸ್ಯ ಸಾಧು ಭದ್ರಂ ಭವಮೋಚನಂ ಭವತಿ । ಯ ಉ ಯ ಏವ ಪ್ರೇಯಃ ದಾರಾಪತ್ಯಾದಿಕಾಮಂ ವೃಣೀತೇ ಸೋಽರ್ಥಾತ್ ಪರಮಪುರುಷಾರ್ಥಾತ್ ಹೀಯತೇ ಹೀನೋ ಭವತಿ । ಭವಪಾಶ ಏವ ಬದ್ಧೋ ಭವತೀತ್ಯರ್ಥಃ ॥ 1 ॥**

ಅಯ್ಯಾ ನಚಿಕೇತ ಕುಮಾರ! ಜ್ಞಾನಿಗಳಿಗೆ ಅತ್ಯಂತ ಪ್ರಿಯತಮವಾದ ಬ್ರಹ್ಮಜ್ಞಾನವು ಬಹಳ ಪ್ರಶಸ್ತವಾದುದು. ಅದು ಅಜ್ಞಾನಿಗಳಿಗೆ ಅತ್ಯಂತ ಪ್ರಿಯವಾದ ಹೆಂಡತಿ ಮಕ್ಕಳು ಮುಂತಾದವುಗಳಿಗಿಂತ ಬೇರೆ. ಇವೆರಡೂ ಸ್ವರೂಪತಃ ಬೇರೆಯೆಂದು ಎಲ್ಲರಿಗೂ ತಿಳಿದೇ ಇದೆ. ಇಲ್ಲಿ ಅವೆರಡೂ ಬೇರೆ ಎಂಬ ಮಾತಿಗೆ ಆ ಅಭಿಪ್ರಾಯವಲ್ಲ. ಹೆಂಡತಿ, ಮಕ್ಕಳು ಮುಂತಾದವರು ಕೇವಲ ಐಹಿಕ ಸುಖಕ್ಕೆ ಸಾಧನರಾಗುತ್ತಾರೆ. ಬ್ರಹ್ಮಜ್ಞಾನವು ಪರಲೋಕಸುಖಕ್ಕೆ ಕಾರಣ. ಹೀಗೆ ಇವೆರಡರ ಫಲವು ಬೇರೆ ಬೇರೆಯಾದುದರಿಂದ ಬ್ರಹ್ಮಜ್ಞಾನವೂ, ಐಹಿಕ ಸುಖಸಾಧನೆಗಳೂ ಬೇರೆಯೆಂದು ಹೇಳಿದ್ದಾಗಿದೆ. ಹೀಗೆ ಬ್ರಹ್ಮಜ್ಞಾನ ಮತ್ತು ಐಹಿಕ ಪುರುಷಾರ್ಥಗಳೆಂಬ ಎರಡು ವಿಷಯಗಳು ವಿವೇಕಿಯಾದ ಪುರುಷನ ಎದುರಿಗೆ ಬಂದು ನಿಲ್ಲುತ್ತವೆ. ಈಗ ಇವೆರಡರಲ್ಲಿ ವಿವೇಕಿಯಾದ ಮನುಷ್ಯನು ಸರಿಯಾದ ಒಂದನ್ನೇ ಆರಿಸಿಕೊಳ್ಳಬೇಕು. ಕೆಲವರು ಬ್ರಹ್ಮವಿದ್ಯೆಯನ್ನೇ ಆರಿಸಿಕೊಳ್ಳುತ್ತಾರೆ. ಅಂತಹವರಿಗೆ ಈ ಸಂಸಾರದಿಂದ ಬಿಡುಗಡೆಯಾಗುತ್ತದೆ. ಯಾರು ಕಳತ್ರ ಪುತ್ರಾದಿ ಸಂಪತ್ತನ್ನೇ ಬಯಸುತ್ತಾರೋ ಅವರಿಗೆ ಉತ್ತಮ ಪುರುಷಾರ್ಥವಾದ ಮೋಕ್ಷವು ಸಿಗುವುದಿಲ್ಲ. ಅವರು ಭವಪಾಶಬದ್ಧರಾಗಿ ತೊಳಲುತ್ತಾ ಇರಬೇಕಾಗುತ್ತದೆ.

ಹಾಗಾದರೆ ಜನಕ, ಪ್ರಿಯವ್ರತ ಮುಂತಾದ ಜ್ಞಾನಿಗಳು ರಾಜ್ಯಶಾಸನವನ್ನು ಮಾಡಿ ಪ್ರಜಾಪಾಲನೆ ಮಾಡುತ್ತಾ ಹೆಂಡತಿ, ಮಕ್ಕಳು ಮುಂತಾದವರನ್ನು ಕಟ್ಟಿಕೊಂಡಿದ್ದರು. ಅವರು ಜ್ಞಾನಿಗಳಲ್ಲವೇ ? ಎಂಬ ಪ್ರಶ್ನೆಯು ಇಲ್ಲಿ ಹುಟ್ಟುತ್ತದೆ.

ಹೌದು. ಅವರು ಬ್ರಹ್ಮಜ್ಞಾನಿಶ್ರೇಷ್ಠರು. ಸ್ವವಿಹಿತವೃತ್ತಿಯಿಂದ ಭಗವದಾರಾಧನ ಮಾಡುವುದೇ ಧರ್ಮ. ಈ ಧರ್ಮಕ್ಕೆ ಸಹಾಯಕರಾಗಿ ಹೆಂಡತಿ ಮಕ್ಕಳು ಮುಂತಾದವರು ಇದ್ದರೆ ಅವರೂ ಕೂಡ ಶ್ರೇಯಸ್ಸಿಗೆ ಸಾಧನರಾಗುತ್ತಾರೆ. ಹಾಗಲ್ಲದಿದ್ದರೆ ಅವರು ಸಂಸಾರಭ್ರಮಣಕ್ಕೆ ಕಾರಣರಾಗುತ್ತಾರೆ. ಈ ವಿಷಯವನ್ನು ಚೆನ್ನಾಗಿ ತಿಳಿದು ಐಹಿಕ ಸುಖಾ-ಪೇಕ್ಷೆಯಿಂದ ಸಂಸಾರಸುಖದಲ್ಲಿ ಆಸಕ್ತರಾಗದೆ, ಎಲ್ಲಾ ಸಾಧನಗಳೂ ಹರಿಸೇವೆಗಾಗಿ ಎಂದು ಭಾವಿಸುವ ಭಗವದ್ಭಕ್ತರಿಗೆ ಯಾವುದೇ ತಡೆಯಿಲ್ಲ, ಬಂಧಕವಲ್ಲ. ಈಗ ಬ್ರಹ್ಮಜ್ಞಾನಿಯು ಹೇಗಿರುತ್ತಾನೆ ? ಅಜ್ಞಾನಿಯು ಹೇಗಿರುತ್ತಾನೆ ? ಎಂಬ ಎರಡು ಪ್ರಶ್ನೆಗಳು ಉಳಿದಿವೆ. ಅವುಗಳಿಗೆ ಈಗ ಉತ್ತರವನ್ನು ಹೇಳುತ್ತಾರೆ.

**ಉಕ್ತಾನುವಾದಪೂರ್ವಕಂ ಜ್ಞಾನಿನಃ ಸ್ಥಿತಿಮಾಹ- ಶ್ರೇಯಶ್ಚೇತಿ ।**

**ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಃ**
**ತೌ ಸಂಪರೀತ್ಯ ವಿವಿನಕ್ತಿ ಧೀರಃ ।**

ಶ್ರೇಯೋ ಧೀರೋಽಭಿಪ್ರೇಯಸೋ ವೃಣೀತೇ
ಪ್ರೇಯೋ ಮಂದೋ ಯೋಗಕ್ಷೇಮಾನ್ ವೃಣೀತೇ ॥ 2 ॥

ಏತ ಇತ್ಯತ್ರ ಆ ಇತ ಇತಿ ಪದಚ್ಛೇದಃ । ಅಙ್ ಪೂರ್ವಸ್ಯ ಇಣ್ ಗತಾವಿತ್ಯಸ್ಯ ರೂಪಮ್ । ಪ್ರಾಗುಕ್ತರೂಪಂ ಶ್ರೇಯಶ್ಚ ಪ್ರೇಯಶ್ಚ ದ್ವೇ ಮನುಷ್ಯಂ ಏತಃ ಪ್ರಾಪ್ಯ ತಿಷ್ಠತಃ । ಧೀರೋ ಜ್ಞಾನೀ ತೌ ಶ್ರೇಯಃಪ್ರೇಯಶಬ್ದಿತೌ ಬ್ರಹ್ಮವಿದ್ಯಾಕಾಮೌ ಸಂಪರೀತ್ಯ ಸಮ್ಯಕ್ ಜ್ಞಾತ್ವಾ ವಿವಿನಕ್ತಿ ಶ್ರೇಯೋ ಮೋಚಕಂ ಪ್ರೇಯೋ ಬಂಧಕಂ ಇತಿ ವಿವೇಚಯತಿ । ಏವಂ ವಿವೇಕಂ ಕೃತ್ವಾ ಕಿಂ ಕರೋತಿ ಇತ್ಯತಃ ಅಹ- ಶ್ರೇಯ ಇತಿ । ಧೀರೋ ವಿವೇಕೀ ಪ್ರೇಯಸಃ ಪ್ರಿಯತಮಾನ್ ದಾರಾಪತ್ಯಾದಿಕಾಮಾನ್ ಅಭಿ, ನಿಪಾತಾನಾ-ಮನೇಕಾರ್ಥತ್ವಾದವಜ್ಞಾಯೇತ್ಯರ್ಥಃ, ಶ್ರೇಯೋ ಬ್ರಹ್ಮವಿದ್ಯಾಂ ವೃಣೀತೇ । ಮಂದೋ ವಿವೇಕ-ಹೀನಃ ಯೋಗಕ್ಷೇಮಾನ್, ಅಪ್ರಾಪ್ತಕಾಮಪ್ರಾಪ್ತಿರ್ಯೋಗಃ, ತಸ್ಯಾನಪಗಮೇನ ಸ್ಥಿರತ್ವಂ ಕ್ಷೇಮಃ, ತದ್ರೂಪಾನ್ ಪ್ರೇಯಸೋ ವೃಣೀತೇ ॥ 2 ॥

ಸಂಸಾರ ಮಾರ್ಗವನ್ನು ಕ್ರಮಿಸುತ್ತಿರುವ ಜಿಜ್ಞಾಸುವಾದ ಪಥಿಕನಿಗೆ ಶ್ರೇಯೋಮಾರ್ಗ ಪ್ರೇಯೋಮಾರ್ಗ ಎಂಬ ಒಂದೇ ರೀತಿಯ ಎರಡು ಕವಲು ಮಾರ್ಗಗಳು ಕಂಡುಬರುತ್ತವೆ. ಈಗ ಯಾವ ಮಾರ್ಗದಲ್ಲಿ ಹೋಗಬೇಕೆಂಬ ಸಂಶಯವು ಹುಟ್ಟುವುದು ಸ್ವಾಭಾವಿಕ. ಇಲ್ಲಿ ಪಥಿಕರೂ ಎರಡು ಬಗೆಯವರಿದ್ದಾರೆ. ಬ್ರಹ್ಮಜ್ಞಾನಾಪೇಕ್ಷಿಗಳು ಮತ್ತು ಲೌಕಿಕ ಸುಖಾಪೇಕ್ಷಿಗಳು. ವಿವೇಕಶಾಲಿಗಳಾದ ಬ್ರಹ್ಮಜಿಜ್ಞಾಸುಗಳು ಈ ಎರಡು ಮಾರ್ಗಗಳ ಸ್ವರೂಪವನ್ನು ಚೆನ್ನಾಗಿ ತಿಳಿದು ಕಳತ್ರ ಪುತ್ರಾದಿಗಳು ಶಾಶ್ವತ ಸುಖಸಾಧನಗಳಲ್ಲವೆಂದು ತಿಳಿದು ಅವುಗಳನ್ನು ತಿರಸ್ಕರಿಸಿ ಬ್ರಹ್ಮವಿದ್ಯೆಯನ್ನೇ ಸ್ವೀಕರಿಸುತ್ತಾರೆ. ವಿವೇಕಹೀನರಾದವರು ಯೋಗಕ್ಷೇಮರೂಪವಾದ ಸಾಂಸಾರಿಕ ಭೋಗ ಸಾಧನೆಗಳನ್ನೇ ಬಯಸುತ್ತಾರೆ. ಇದುವರೆಗೆ ಸಿಗದಿರುವ ವಸ್ತುವು ಸಿಗುವುದು ಯೋಗ. ಸಿಕ್ಕಿದ್ದನ್ನು ಕಾಪಾಡಿಕೊಳ್ಳುವುದೇ ಕ್ಷೇಮ. ಸಂಸಾರಿಗಳಾದವರಿಗೆ ಇವೆರಡೂ ಅತ್ಯಾವಶ್ಯಕವಾಗಿವೆ. ಆದರೆ ಈ ಯೋಗಕ್ಷೇಮಗಳು ನಿನ್ನ ಸುಖಕ್ಕೆ ಎಂದಿಗೂ ಕಾರಣವಾಗಲಾರವು. ಇದನ್ನು ತಿಳಿಯದ ಮಂದರು ಮಂದಪ್ರಜ್ಞರು ಭೋಗಸಾಧನೆಗಳನ್ನೇ ಬಯಸಿ ಸಂಸಾರ ಚಕ್ರದಲ್ಲಿ ತಿರುಗುತ್ತಾ ಇರುತ್ತಾರೆ.

ಯತ್ಪ್ರಶಂಸಾರ್ಥಂ ಉಪೋದ್ಘಾತ ಉಕ್ತಸ್ತಾಮಾಹ- ಸ ತ್ವಮಿತಿ ।

ಸ ತ್ವಂ ಪ್ರಿಯಾನ್ ಪ್ರಿಯರೂಪಾಂಶ್ಚ ಕಾಮಾನ್
ಅಭಿಧ್ಯಾಯನ್ ನಚಿಕೇತೋಽತ್ಯಸ್ರಾಕ್ಷೀಃ ।
ನೈತಾಂ ಶೃಂಕಾಂ ವಿತ್ತಮಯೀಮವಾಪ್ತೋ
ಯಸ್ಯಾಂ ಮಜ್ಜಂತಿ ಬಹವೋ ಮನುಷ್ಯಾಃ ॥ 3 ॥

ಹೇ ನಚಿಕೇತಃ, ಸ ತ್ವಂ ಮಯಾ ಪ್ರಲೋಭಿತೋಽಪಿ ತ್ವಂ ಪ್ರಿಯಾನ್ ದಾರಾಪತ್ಯಾದೀನ್ ಪ್ರಿಯರೂಪಾಂಶ್ಚ ಗೃಹಾರಾಮಕ್ಷೇತ್ರಾದೀಂಶ್ಚ ಕಾಮಾನ್ ಕಾಮ್ಯಮಾನಾನ್ ಅಭಿಧ್ಯಾಯನ್

**ಅಸ್ಥಿರತಯಾ ಮನ್ವಾನಃ ಅನ್ಯತ್ ಬ್ರಹ್ಮಸ್ವರೂಪಂ ಪ್ರಾಕ್ಷೀಃ ಅಪ್ರಾಕ್ಷೀಃ, ಅಡಭಾವಃ ಛಾಂದಸಃ, ಪೃಷ್ಟ-ವಾನಸಿ । ಅತ್ಯಸ್ರಾಕ್ಷೀರಿತಿ ಪಾಠೇ ತ್ಯಕ್ತವಾನಭೂರಿತ್ಯರ್ಥಃ । ವಿತ್ತಮಯೀಂ ಸುವರ್ಣ ಮಯೀಮೇತಾಂ ಕಂಠಧಾರಣಯೋಗ್ಯಾಂ ಶೃಂಕಾಂ ಶೃಂಖಲಾಂ ನಾವಾಪ್ತಃ ನ ಸ್ವೀಕೃತವಾನ್ । ಶೃಂಕೇಯಮತಿ-ಶ್ಲಾಘ್ಯೇತ್ಯಾಹ - ಯಸ್ಯಾಂ ಮಜ್ಜಂತಿ ಆಸಕ್ತಾಃ ಭವಂತಿ ಬಹವೋ ಮನುಷ್ಯಾಃ । ತಾದೃಶೀಮಪಿ ಮಯಾ ದೀಯಮಾನಾಂ ನ ಗೃಹೀತವಾನ್ । ಅತಸ್ತ್ವಂ ಪ್ರಶಸ್ತ ಇತಿ ಭಾವಃ ॥ 3 ॥**

ನಚಿಕೇತನೇ, ನಾನು ಇಷ್ಟು ದೊಡ್ಡ ಭೂಮಿಕೆಯನ್ನು ಏಕೆ ರಚಿಸಿದೆನೆಂದು ನಿನಗೆ ಈಗ ತಿಳಿದಿರಬಹುದು. ನಾನು ನಿನ್ನನ್ನು ಅನೇಕ ರೀತಿಯಿಂದ ಪ್ರಲೋಭನಗೊಳಿಸಿದೆನು. ಲೋಕದಲ್ಲಿ ಎಲ್ಲರೂ ಅಪೇಕ್ಷಿಸುವ ಹೆಂಡತಿ ಮಕ್ಕಳು ಮತ್ತು ಅವರನ್ನು ಸಾಕಲು ಬೇಕಾಗುವ ಮನೆ, ತೋಟ, ಹೊಲ ಮುಂತಾದ ಭೋಗಸಾಧನೆಗಳನ್ನು ನೀನು ತಿರಸ್ಕರಿಸಿದೆ. ನಿನಗೆ ಅವುಗಳು ಅಸ್ಥಿರ, ನಶ್ವರ, ಎಂಬ ದೃಢ ನಿಶ್ಚಯವು ಉಂಟಾಗಿತ್ತಲ್ಲವೇ ? ಆದ್ದರಿಂದಲೇ ನೀನು ಅವುಗಳನ್ನು ಬಿಟ್ಟು ಬ್ರಹ್ಮಸ್ವರೂಪವನ್ನೇ ಕೇಳಿದ್ದೀ. ಅಷ್ಟೇ ಅಲ್ಲ, ನಿನ್ನ ಕೈಯಲ್ಲಿರುವ ಈ ಸುವರ್ಣಮಾಲಿಕೆಯನ್ನೂ ಬೇಡವೆಂದೆ. ಈ ಮಾಲೆಯು ಸಾಧಾರಣವಾದುದಲ್ಲ, ಇದನ್ನು ನೋಡಿದವರು ಯಾರೇ ಆಗಲಿ, ಇದನ್ನು ಆಶಿಸದೆ ಇರುವುದಿಲ್ಲ. ಅಂತಹ ಮಾಲೆಯನ್ನು ಕೊಡುವೆನೆಂದರೂ ಬೇಡವೆಂದ ನೀನು ನಿಜವಾಗಿಯೂ ಪ್ರಶಂಸೆಗೆ ಯೋಗ್ಯನಾಗಿದ್ದೀ. ಈಗ ನಾನು ನಿನ್ನನ್ನು ದಾರಿ ತಪ್ಪಿಸಲು ಹೊಗಳುತ್ತಿಲ್ಲ, ನಿನ್ನ ಬ್ರಹ್ಮವಿದ್ಯಾಭಿರುಚಿಯನ್ನು ಕಂಡು ಸಂತೋಷಪಟ್ಟು ಹೊಗಳುತ್ತಿದ್ದೇನೆ.

ಪ್ರೇಯಸ್ಸು ಎಂದರೇನು ? ಪ್ರೀತಿಪಾತ್ರರಾದ ಹೆಂಡತಿ ಮಕ್ಕಳು ಮುಂತಾದವರು ಅವರ ಪ್ರೀತಿ ಸಂಪಾದನೆಗೆ ಕಾರಣವಾದ, ಮನೆ, ತೋಟ, ಹೊಲ ಮುಂತಾದವುಗಳು.

**ಪೂರ್ವಂ ಯೋಗಕ್ಷೇಮಾನ್ ಇತಿ ಪ್ರಿಯಾನ್ ಪ್ರಿಯರೂಪಾಂಶ್ಚೇತಿ ಪ್ರೇಯಃಸ್ವರೂಪಂ ಕಿಂಚಿತ್ ಸ್ಪಷ್ಟೀಕೃತಮ್ । ಶ್ರೇಯಃಸ್ವರೂಪಂ ತು ನ ಸ್ಪಷ್ಟಮ್ । ಶ್ರೇಯ ಆದದಾನಸ್ಯೇತಿ ಸಾಮಾನ್ಯತ ಉಕ್ತೇಃ । ಅತಸ್ತದುಭಯಂ ಸ್ಪಷ್ಟಯನ್ ನಚಿಕೇತಸಂ ಸ್ತೌತಿ - ದೂರಮಿತಿ ।**

**ದೂರಮೇತೇ ವಿಪರೀತೇ ವಿಷೂಚೀ**
**ಅವಿದ್ಯಾ ಯಾ ಚ ವಿದ್ಯೇತಿ ಜ್ಞಾತಾ ।**
**ವಿದ್ಯಾಭೀಪ್ಸಿತಂ ನಚಿಕೇತಸಂ ಮನ್ಯೇ**
**ನ ತ್ವಾ ಕಾಮಾ ಬಹವೋ ಲೋಲುಪಂತಃ ॥ 4 ॥**

**ಯಾ ಅವಿದ್ಯಾ ವಿದ್ಯಾಭಿನ್ನಾ ಐಹಿಕಸುಖಸಾಧನತ್ವೇನ ಜ್ಞಾತಾ ಯಾ ಚ ವಿದ್ಯೇತಿ ಜ್ಞಾತಾ, ಏತೇ ದೂರಂ ಅನ್ಯೋನ್ಯಂ ವಿದೂರತೋ ವರ್ತಮಾನೇ । ತದೇವಾಹ- ವಿಪರೀತ ಇತಿ । ಪರಸ್ಪರವಿರುದ್ಧೇ । ತತ್ ವ್ಯನಕ್ತಿ ವಿಷೂಚೀ ವಿಷೂಚೀನೇ ವಿರುದ್ಧಫಲಹೇತೂ । ನಚಿಕೇತಸಂ ತ್ವಾ ತ್ವಾಂ ವಿದ್ಯಾಭೀಪ್ಸಿತಂ ವಿದ್ಯಾಭಿಕಾಂಕ್ಷಿಣಂ ಮನ್ಯೇ ಜಾನಾಮಿ । ಬಹವಃ ಕಾಮಾಃ ತ್ವಾ ತ್ವಾಂ ಲೋಲುಪಂತಃ ಲೋಲುಪಯಂತಃ ಅಪೇಕ್ಷಾಂ ಜನಯಂತಃ ನ ವರ್ತಂತ ಇತ್ಯರ್ಥಃ । ಕಾಮ್ಯೈಃ ಪ್ರಲುಬ್ಧಸ್ತ್ವಂ ನ ಭವಸೀತಿ ಯಾವತ್ ॥ 4 ॥**

ಈ ವಿಷಯವನ್ನು ಹಿಂದೆಯೇ ಸ್ವಲ್ಪ ಸ್ಪಷ್ಟೀಕರಿಸಿದೆ. ಶ್ರೇಯಸ್ಸನ್ನು ಸ್ವೀಕರಿಸಿದವನಿಗೆ ಮಂಗಲವಾಗುತ್ತದೆ ಎಂದೂ ಹೇಳಿದ್ದೂ ಆಗಿದೆ. ಆದರೆ ಶ್ರೇಯಸ್ಸಿನ ಸ್ವರೂಪವನ್ನು ಸ್ಪಷ್ಟಪಡಿಸಿಲ್ಲ. ಈಗ ಅವೆರಡನ್ನೂ ಸ್ಪಷ್ಟವಾಗಿ ತಿಳಿಯಬೇಕೆಂದು ನಮಗೆ ಅನ್ನಿಸುತ್ತದೆಯಲ್ಲವೇ ? ಆ ವಿಷಯವನ್ನು ಯಮಧರ್ಮರಾಜನು ಸ್ಪಷ್ಟವಾಗಿ ಹೇಳುತ್ತಿದ್ದಾನೆ.

ನಚಿಕೇತನೇ ! ಅವಿದ್ಯೆಯು ವಿದ್ಯೆಗಿಂತ ಸರ್ವಥಾ ಭಿನ್ನವಾದುದು. ಅವಿದ್ಯೆಯು ಇಹಲೋಕದ ಸುಖಕ್ಕೆ ಮಾತ್ರವೇ ಸಾಧನವಾಗುತ್ತದೆ. ವಿದ್ಯೆಯು ಇದಕ್ಕಿಂತ ತೀರ ಭಿನ್ನವಾದುದು. ಈ ವಿದ್ಯೆ ಅವಿದ್ಯೆಗಳೆರಡೂ ಬಹಳ ದೂರದಲ್ಲಿರುತ್ತವೆ. ಏಕೆಂದರೆ ಇವೆರಡರ ಫಲಗಳು ಸರ್ವಥಾ ವಿರುದ್ಧವಾಗಿರುತ್ತವೆ. ಈ ವಿಷಯವನ್ನು ನಾನು ನಿನಗೆ ಹಿಂದೆಯೇ ಹೇಳಿರುತ್ತೇನೆ. ನಚಿಕೇತನೇ ! ನೀನು ಮಾತ್ರ ವಿದ್ಯಾಕಾಮನೆಯಿಂದ ಕೂಡಿರುತ್ತೀ. ನಾನು ನಿನ್ನ ಮುಂದೆ ವರ್ಣಿಸಿದ ಅನೇಕ ಕಾಮನೆಗಳಲ್ಲಿ ನೀನು ಒಂದನ್ನೂ ಅಪೇಕ್ಷಿಸಲಿಲ್ಲ. ಅವುಗಳಿಗೆ ಮರುಳಾಗದಿರುವ ನೀನು ಉತ್ತಮಾಧಿಕಾರಿಯಾಗಿದ್ದೀ.

**ಶ್ರೇಯಶ್ಶಬ್ದಿತವಿದ್ಯಾಕಾಮಃ ಶ್ರೇಯಾನಿತಿ ಭಾವೇನಾವಿದ್ಯಾಶಬ್ದಿತಪ್ರೇಯಸ್ಕಾಮಾನ್ ನಿಂದತಿ ಯಮಃ- ಅವಿದ್ಯಾಯಾಮಿತಿ ।**

**ಅವಿದ್ಯಾಯಾಮಂತರೇ ವರ್ತಮಾನಾಃ**
**ಸ್ವಯಂ ಧೀರಾಃ ಪಂಡಿತಂಮನ್ಯಮಾನಾಃ ।**
**ದಂದ್ರಮ್ಯಮಾಣಾಃ ಪರಿಯಂತಿ ಮೂಢಾಃ**
**ಅಂಧೇನೈವ ನೀಯಮಾನಾ ಯಥಾಂಧಾಃ ॥ 5 ॥**

**ಬ್ರಹ್ಮವಿದ್ಯೇತರಸ್ಮಿನ್ ಅಂತರೇ ಅವಿದ್ಯಾಯಾ ಮಧ್ಯೆ ವರ್ತಮಾನಾಃ ಕೇವಲಂ ತನ್ಮಾತ್ರೋಪಾಸಕಾಃ ಸ್ವಯಂ ಧೀರಾಃ ಸ್ವಯಮೇವ ಧೀಮಂತ ಇತಿ ವದಂತಃ ಆತ್ಮಾನಂ ಪಂಡಿತಂ ಮನ್ಯಮಾನಾಃ ಜಾನಂತಃ ದಂದ್ರಮ್ಯಮಾಣಾಃ ವಕ್ರಗತಯಃ । ದ್ರಮೇಃ ಕುಟಿಲಗತ್ಯರ್ಥತ್ವಾತ್ । ಮೂಢಾಃ ಕಾಮಭೋಗೇನ ಮೋಹಿತಾಃ । ಪರಿಯಂತಿ ಪರಿತಃ ಸ್ವರ್ಗನರಕಾದೀನ್ ಗಚ್ಛಂತಿ । ತತ್ರ ದೃಷ್ಟಾಂತಃ ಅಂಧೇನೈವೇತಿ । ॥ 5 ॥**

ಶ್ರೇಯಸ್ಸು ಎಂದರೆ ವಿದ್ಯೆ, ಪ್ರೇಯಸ್ಸು ಎಂದರೆ ಅವಿದ್ಯೆ, ಇವುಗಳಲ್ಲಿ ಪ್ರೇಯಸ್ಸನ್ನು ಬಯಸುವವನು ನಿಜವಾಗಿಯೂ ಜ್ಞಾನಿಗಳ ದೃಷ್ಟಿಯಿಂದ ಶೋಚನೀಯನು ಎಂದು ಯಮಧರ್ಮರಾಜನು ಹೇಳುತ್ತಿದ್ದಾನೆ.

ಬ್ರಹ್ಮವಿದ್ಯೆಗಿಂತ ಬೇರೆಯಾದುದೆಲ್ಲವೂ ಅವಿದ್ಯೆ. ಈ ಅವಿದ್ಯೆಯ ಜಾಲದಲ್ಲಿ ಅನೇಕರು ಸಿಕ್ಕುಬಿದ್ದಿರುತ್ತಾರೆ. ಅದನ್ನೇ ತಾರಕವೆಂದು ಉಪಾಸಿಸುತ್ತಾ ಇರುತ್ತಾರೆ. ನಾವು ಬುದ್ಧಿವಂತರು, ಬರೇ ಬುದ್ಧಿವಂತರಲ್ಲ ವಿಶೇಷ ಬುದ್ಧಿಯುಳ್ಳ ಪಂಡಿತರು ಎಂದು ಅವರು ತಿಳಿದಿರುತ್ತಾರೆ. ಆದರೆ ತಾಯಿ ಏಡಿಯು ತಾನು ವಕ್ರವಾಗಿ ನಡೆಯುತ್ತಾ ಮರಿಗಳಿಗೆ ನೀವು ವಕ್ರವಾಗಿ ನಡೆಯಬೇಡಿರೆಂದು ಉಪದೇಶಿಸುವಂತೆ ತಾವು ಕಣ್ಣುಮುಚ್ಚಿ ವಕ್ರಮಾರ್ಗದಲ್ಲಿ ಸಾಗುತ್ತಿದ್ದರೂ ಬ್ರಹ್ಮಜ್ಞಾನಿಗಳ ಮಾರ್ಗವೇ ವಕ್ರವಾದುದು ಎಂದು ಹೇಳುತ್ತಾ ಇರುತ್ತಾರೆ. ಕಾಮಭೋಗಾಸಕ್ತರಾದ ಅವರ ಬುದ್ಧಿಯು ಮೋಹಗೊಂಡಿರುತ್ತದೆ. ಇಂತಹವರು ಸ್ವರ್ಗ ಮತ್ತು ನರಕ ಮುಂತಾದ ಲೋಕಗಳಿಗೆ ಹೋಗುತ್ತಾ ಬರುತ್ತಾ ಇರುತ್ತಾರೆ. ಕುರುಡನನ್ನು ಮುಂದಿಟ್ಟು-

ಕೊಂಡು ಅವನು ನಡೆಸುವ ದಾರಿಯಲ್ಲೇ ನಡೆಯುತ್ತಿರುವ ಕುರುಡರಂತೆ ಈ ಅವಿದ್ಯೋಪಾಸಕರ ಅವಸ್ಥೆಯಾಗುತ್ತದೆ. ಇವರು ಶೋಚನೀಯರಲ್ಲವೇ ? ॥ 5 ॥

**ಕುತ ಏವಂ ಫಲ್ಗುಕಾಮೇಷ್ವಾಸಕ್ತಿಃ ಇತ್ಯತಃ ಶ್ರೇಯಸ್ಸಾಧನಾದರ್ಶನಾತ್ ಇತ್ಯಾಹ- ನ ಸಾಂಪ-ರಾಯ ಇತಿ ॥**

**ನ ಸಾಂಪರಾಯಃ ಪ್ರತಿಭಾತಿ ಬಾಲಂ**
**ಪ್ರಮಾದ್ಯಂತಂ ವಿತ್ತಮೋಹೇನ ಮೂಢಮ್ ।**
**ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ**
**ಪುನಃ ಪುನಃ ವಶಮಾಪದ್ಯತೇ ಮೇ ॥ 6 ॥**

**ಸಾಂಪರಾಯಃ ಶ್ರೇಯಸ್ಸಾಧನೀಭೂತೋ ಭಗವಾನ್ ನ ಭಾತಿ ನ ತಜ್ಜ್ಞಾನವಿಷಯೋ ಭವತಿ । ಕುತೋ ನ ಭಾತೀತ್ಯತ ಉಕ್ತಂ- ಬಾಲಮಿತಿ । ಬಾಲಸದೃಶಂ, ವಿತ್ತಮೋಹೇನ ಮೂಢಂ ಅತ ಏವ ಪ್ರಮಾದ್ಯಂತಂ ಪ್ರಮಾದೋಪೇತಂ ಪ್ರತಿ ನ ಭಾತೀತ್ಯನ್ವಯಃ । ವಿತ್ತಮೋಹೇನ ಮೂಢ-ತ್ವಾದೇವ ತಂ ಪ್ರತಿ ನ ಭಾತೀತ್ಯರ್ಥಃ । ವಿತ್ತಮೂಢತ್ವಂ ವ್ಯನಕ್ತಿ- ಅಯಂ ಲೋಕ ಇತಿ । ಅಯಂ ಲೋಕೋ ಭೂಲೋಕಃ ಅಸ್ತಿ । ಪರೋ ಲೋಕಃ ಆಮುಷ್ಮಿಕಸ್ತು ನಾಸ್ತಿ । ಐಶ್ವರ್ಯಂ ಸ್ಥಿರಮಿತಿ ಮಾನೀ ಅಭಿಮಾನೀತಿ ಯಾವತ್, ಪುನಃ ಪುನಃ ಮೇ ಯಮಸ್ಯ ಮಮ ವಶಮಾಪದ್ಯತೇ । ವಿತ್ತಮೂಢೋ ವಿತ್ತಾದಿಕಂ ನಿತ್ಯಂ ಮನ್ವಾನೋ ಮೃತ್ವಾ ಮೃತ್ವಾ ಯಮಯಾತನಾಮೇವಾನುಭವತೀತ್ಯರ್ಥಃ ॥ 6 ॥**

ಅವಿದ್ಯೋಪಾಸಕರಿಗೆ ತುಚ್ಛವಾದ ಕಾಮಗಳಲ್ಲಿ ಏಕೆ ಆಸಕ್ತಿಯುಂಟಾಗುತ್ತದೆ ? ಶಾಶ್ವತ ಇಷ್ಟವನ್ನು ಸಂಪಾದಿಸಲವರು ಏಕೆ ಬಯಸುವುದಿಲ್ಲ? ಎಂಬ ಪ್ರಶ್ನೆಗೆ ಯಮದೇವ ಉತ್ತರ ಹೇಳುತ್ತಿದ್ದಾನೆ. ಅವಿದ್ಯೆಯ ಅಂಧಕಾರದಲ್ಲಿ ಮಗ್ನನಾದವನಿಗೆ ಶ್ರೇಯಸ್ಸಿನ ದಾರಿಯು ಕಾಣಿಸುವುದಿಲ್ಲ, ಅದುದರಿಂದ ಅವನು ತನ್ನ ಕುಮಾರ್ಗವನ್ನು ಬಿಟ್ಟು ಬರಲಾರನು. ಅದು ಹೇಗೆ ಎಂಬುದನ್ನು ಯಮನು ವಿವರಿಸುತ್ತಿದ್ದಾನೆ.

ಶ್ರೇಯಸ್ಸಿಗೆ ಸಾಧನವಾಗಿರುವ ಪರಮಾತ್ಮನು ಬಾಲಕರಂತೆ ಇರುವ ಅವಿದ್ಯೋಪಾಸಕರ ಬುದ್ಧಿಗೆ ಗೋಚರವಾಗುವುದಿಲ್ಲ, ಅವರು ಹಣದ ಮೋಹದಿಂದ ಮಂಕರಾಗಿರುತ್ತಾರೆ. ಆ ಕಾರಣದಿಂದಲೇ ತಮ್ಮ ಶ್ರೇಯಸ್ಸಾಧಕವಾದ ನಿಯಮಗಳನ್ನು ಸರಿಯಾಗಿ ಅನುಸರಿಸಲಾರದೆ ಹೋಗುತ್ತಾರೆ. ನಾವು ಈ ಲೋಕದಲ್ಲಿ ಮಾತ್ರವೇ ಸುಖವನ್ನು ಅನುಭವಿಸಬಹುದು. ಪರಲೋಕವು ಇಲ್ಲ, ಈ ಐಶ್ವರ್ಯವನ್ನು ಸ್ಥಿರವಾಗಿ ಉಳಿಸಿಕೊಂಡು ಸುಖಪಡಬೇಕು ಎಂದು ಭಾವಿಸುವ ಜನರು ಹುಟ್ಟಿ ಸತ್ತು ನನ್ನ ಲೋಕದಲ್ಲಿ ಯಾತನೆಯನ್ನು ಅನುಭವಿಸಿ ಪುನಃ ಹುಟ್ಟುತ್ತಾರೆ. ಅವರಿಗೆ ಈ ಸಂಸಾರ ಚಕ್ರದಿಂದ ಎಂದೂ ಬಿಡುಗಡೆಯಾಗುವುದಿಲ್ಲ.

**ಭಗವತೋಽಭಾನೇ ಹೇತ್ವಂತರಮಾಹ - ಶ್ರವಣಾಯೇತಿ ॥**

**ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ**
**ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ ।**

**ಆಶ್ಚರ್ಯೋಽಸ್ಯ ವಕ್ತಾ ಕುಶಲೋಽಸ್ಯ ಲಬ್ಧಾ**
**ಆಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ ॥ 7 ॥**

**ಯಸ್ಸಾಂಪರಾಯಶಬ್ದಿತೋ ಭಗವಾನ್ ಬಹುಭಿಃ ಶ್ರವಣಾಯ ನ ಲಭ್ಯಃ । ಬಹೂನಾಂ ಶ್ರವಣಜನ್ಯಜ್ಞಾನವಿಷಯೋ ನ ಭವತಿ । ತರ್ಹಿ ಕಿಂ ಶಬ್ದಾವೇದ್ಯ ಏವ, ನೇತ್ಯಾಹ । ಶೃಣ್ವಂತೋಪಿ ಶಬ್ದಾತ್ ತಂ ಜಾನಂತೋಽಪಿ ಬಹವಃ ಯಂ ನ ವಿದ್ಯುಃ ನ ಜಾನಂತಿ । ಕಾರ್ತ್ಸ್ನ್ಯೇನೇತಿ ವಾ ಯಥಾವತ್ತ್ವೇನೇತಿ ವಾಽಭಿಪ್ರಾಯಃ । ಅತೋ ನ ವಿತ್ತಮೂಢಂ ಪ್ರತಿಭಾತೀತ್ಯನ್ವಯಃ । ಕುತೋ ನ ವಿದ್ಯುರಿತ್ಯತೋ ಯಥಾವತ್ತಯಾ ತತ್‌ಸ್ವರೂಪವತ್ತಯಾ ಶ್ರೋತಾ ಚ ದುರ್ಲಭ ಇತ್ಯಾಹ- ಆಶ್ಚರ್ಯ ಇತಿ । ಅಸ್ಯ ಸಾಂಪರಾಯಶಬ್ದಿತಸ್ಯ ಶ್ರೇಯಸ್ಸಾಧನೀಭೂತಭಗವತಃ ಕುಶಲೋ ವಕ್ತಾ ಯಥಾವತ್ತತ್ ಸ್ವರೂಪೋಪದೇಷ್ಟಾ ಆಶ್ಚರ್ಯೋ ದುರ್ಲಭಃ । ಕುಶಲಾನುಶಿಷ್ಟಃ ಯಥಾವದನುಶಿಕ್ಷಿತಃ ಅಸ್ಯ ವಕ್ತುಃ ಲಬ್ಧಾ ಪ್ರಾಪ್ತಾ ಯಥಾವತ್ ಬ್ರಹ್ಮಸ್ವರೂಪವಕ್ತೃಭೂತಾಚಾರ್ಯಪ್ರಾಪ್ತಿಮಾನ್ ಜ್ಞಾತಾ ಶ್ರೋತಾ ಚ ಆಶ್ಚರ್ಯಃ ದುರ್ಲಭ ಇತ್ಯರ್ಥಃ ॥ 7 ॥**

ಅವಿದ್ಯೋಪಾಸಕರಿಗೆ ಶ್ರೇಯಸ್ಸಾಧನವಾಗಿರುವ ಭಗವಂತನ ವಿಚಾರವು ಮನಸ್ಸಿನಲ್ಲಿ ಹೊಳಿಯದೇ ಇರುವುದಕ್ಕೆ ಬೇರೆ ಕಾರಣವಿದೆಯೇ ಎಂದು ಕೇಳಿದರೆ ದಂಡಧರನು ಹೌದು ಎಂದು ಹೇಳುತ್ತಿದ್ದಾನೆ.

ಸಾಂಪರಾಯ ಎಂಬ ಹೆಸರುಳ್ಳ ಪರಮಾತ್ಮನ ತತ್ತ್ವವನ್ನು ಬಹಳ ಮಂದಿ ತಿಳಿಯಲು ಬಯಸುವುದೇ ಇಲ್ಲ. ತಿಳಿಯಲು ಪ್ರಯತ್ನ ಪಡುವವರಲ್ಲಿ ಅನೇಕರಿಗೆ ತತ್ತ್ವ ಶ್ರವಣದಿಂದಲೂ ಪರಮಾತ್ಮನ ಸರಿಯಾದ ಜ್ಞಾನವಾಗುವುದಿಲ್ಲ. ಪರಮಾತ್ಮನನ್ನು ಶಬ್ದಗಳಿಂದ ತಿಳಿಸಲಾಗುವುದಿಲ್ಲವಾದುದರಿಂದ ಶ್ರವಣ ಮಾಡಿದರೂ ಜ್ಞಾನವುಂಟಾಗುವುದಿಲ್ಲ ಎಂದು ಇದರ ಅರ್ಥವಲ್ಲ. ಶಬ್ದದಿಂದ ಕೆಲವರು ತಿಳಿಯುತ್ತಾರೆ. ಆದರೂ ಸಂಪೂರ್ಣವಾಗಿ ಮತ್ತು ಸರಿಯಾಗಿ ಪರಮಾತ್ಮನನ್ನು ಅನೇಕರು ತಿಳಿಯುವುದಿಲ್ಲ. ಪ್ರೇಯಸ್ಸನ್ನೇ ಅಪೇಕ್ಷಿಸುವ ಈ ಅವಿದ್ಯೋಪಾಸಕರು ಇಹಲೋಕದ ಐಶ್ವರ್ಯವನ್ನೇ ಸ್ಥಿರವೆಂದು ತಿಳಿದು ಅದರಲ್ಲಿಯೇ ಮುಳುಗಿರುವುದರಿಂದ ಅವರಲ್ಲೇ ಅನೇಕರಿಗೆ ಪರಮಾತ್ಮನ ತತ್ತ್ವ ಶ್ರವಣದ ಅವಕಾಶವೇ ದೊರೆಯುವುದಿಲ್ಲ. ದೊರೆತರೂ ಸರಿಯಾದ ಜ್ಞಾನವಾಗುವುದಿಲ್ಲ. ಹೀಗಾಗಲು ಇನ್ನೂ ಒಂದು ಕಾರಣವಿದೆ. ಪರಮಾತ್ಮನ ತತ್ತ್ವವನ್ನು ತಾನೂ ಸರಿಯಾಗಿ ಉಪದೇಶದಿಂದ ತಿಳಿದು ಇನ್ನೊಬ್ಬರಿಗೆ ಸರಿಯಾಗಿ ಉಪದೇಶಮಾಡುವವನು ದುರ್ಲಭನಾಗಿರುತ್ತಾನೆ. ಹಾಗೆಯೇ ಹಿರಿಯರಿಂದ ಸರಿಯಾಗಿ ಪ್ರೇರಿತನಾಗಿ ಇಂತಹ ಉಪದೇಶಕನನ್ನು ಹುಡುಕಿಕೊಂಡು ಹೋಗುವವನೂ ದುರ್ಲಭನು. ಹುಡುಕಿದರೂ ಅಂತಹ ಗುರುವನ್ನು ಪಡೆಯುವವನು ದುರ್ಲಭನು. ಕೆಲವರು ಇಂತಹ ಗುರುವನ್ನು ಕಷ್ಟಪಟ್ಟು ಪಡೆಯಬಹುದು. ಆದರೆ ಅಂತಹವರಿಗೂ ಸರಿಯಾದ ಶ್ರವಣ ಮತ್ತು ಆ ಶ್ರವಣದಿಂದ ಜ್ಞಾನವಾಗುವುದು ಬಹಳ ಕಷ್ಟ. ಹೀಗೆ ಅವಿದ್ಯೋಪಾಸಕರಿಗೆ ಧನಮೋಹದಿಂದಾಗಿ ಉತ್ತಮ ಗುರುವು ದೊರಕಿದರೂ ಜ್ಞಾನಪ್ರಾಪ್ತಿಯಾಗಲಾರದು. ಆದುದರಿಂದ ಜ್ಞಾನಾರ್ಥಿಯಾದವನು ಇಹಲೋಕದ ಭೋಗಭಾಗ್ಯಗಳಿಗೆ ಆಶೆಪಡಬಾರದು. ॥ 7 ॥

ನಚಿಕೇತನು ಕೇಳಿದನು :- ಯಮರಾಜನೇ ನೀನು ಹೇಳಿದಂತೆ ನಿರೀಶ್ವರವಾದಿಗಳಿಗೆ ಪರಮಾತ್ಮನ ಜ್ಞಾನ-ವಾಗಲಾರದು ಎಂದು ಒಪ್ಪಿಕೊಂಡರೂ, ಈಶ್ವರನನ್ನು ಒಪ್ಪಿ ಅವನಲ್ಲಿ ವಿಶ್ವಾಸವನ್ನಿಟ್ಟಿರುವವರಿಗೆ ಅವನ ಸರಿಯಾದ ಜ್ಞಾನ

ಮತ್ತು ಪ್ರಾಪ್ತಿಗಳು ಆಗಲೇಬೇಕಲ್ಲವೆ ? ಹಾಗಿರುವಾಗ ಪರಮಾತ್ಮನ ವಿಷಯವನ್ನು ಸರಿಯಾಗಿ ಉಪದೇಶಿಸತಕ್ಕ ಗುರುವೂ, ಅದನ್ನು ಆದರದಿಂದ ಸರಿಯಾಗಿ ಕೇಳತಕ್ಕ ಶ್ರೋತೃವೂ ದುರ್ಲಭನೆಂದು ಹೇಳಿದುದು ಹೇಗೆ ?

**ನಿರೀಶ್ವರವಾದಿನಾಂ ತದಜ್ಞಾನೇಽಪಿ ಸೇಶ್ವರಾಸ್ತು ಜಾನಂತ್ಯೇವೇತ್ಯತಃ ಕಥಂ ವಕ್ತೃಶ್ರೋತ್ರೋ-ರ್ದುರ್ಲಭತ್ವಂ ಇತ್ಯತಃ ಸಮ್ಯಗ್‌ಜ್ಞಾನಿನಸ್ತೇ ನ ಭವಂತೀತ್ಯಾಹ- ನ ನರೇಣೇತಿ ।**

**ನ ನರೇಣಾವರಃ ಪ್ರೋಕ್ತ ಏಷಃ**
**ಸುಜ್ಞೇಯೋ ಬಹುಧಾ ಚಿಂತ್ಯಮಾನಃ ।**
**ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ**
**ಅಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್ ॥ 8 ॥**

**ನರೇಣಾಜ್ಞಾನಿಮನುಷ್ಯೇಣ ಪ್ರೋಕ್ತೋಽವರಃ ಅಪ್ರಕೃಷ್ಟಃ ಕುತಃ ? ಬಹುಧಾ ಪ್ರಕೃತ್ಯುಪ-ಸರ್ಜನತ್ವಾತ್ ಅಲ್ಪಗುಣತ್ವಪ್ರಾಕೃತದೇಹತ್ವಾದಿನಾನಾಪ್ರಕಾರೇಣ ಚಿಂತ್ಯಮಾನಸ್ಸನ್ ತೈರೇಷಃ ಸು ಸಮ್ಯಕ್ ಯಥಾವತ್ತಯಾ ಜ್ಞೇಯೋ ನ ಭವತೀತಿ । ಅದ್ವೈತಿನಾ ಪ್ರೋಕ್ತೇ ಭಗವಜ್‌ಜ್ಞಾನಮೇವ ನ ಜಾಯತ ಇತ್ಯಾಹ- ಅನನ್ಯೇತಿ ।**

**ಅಹಂ ಬ್ರಹ್ಮಣೋ ಅನನ್ಯ ಇತಿ ಜಾನನ್ ಸ್ವಾತ್ಮಬ್ರಹ್ಮಣೋರ್ಭೇದಮಜಾನನ್ ಐಕ್ಯಮೇವ ಜಾನನ್ ಅನನ್ಯ ಉಚ್ಯತೇ । ತೇನ ಪ್ರೋಕ್ತೇ ಅತ್ರ ಬ್ರಹ್ಮವಿಷಯೇ ಗತಿರ್ಜ್ಞಾನಂ ನಾಸ್ತಿ । ಯತ್ಕಿಂಚಿ-ನ್ನಿರ್ವಿಕಲ್ಪಕ(ವಸ್ತು)ಜ್ಞಾನಮೇವ ನ ಭವತೀತಿ ಭಾವಃ । ವ್ಯಾಖ್ಯಾತೃವಚನೇನ ಬ್ರಹ್ಮಜ್ಞಾನಾಭಾವೇಽಪಿ ಪ್ರತ್ಯಕ್ಷಾನುಮಾನಾಭ್ಯಾಂ ಸ್ಯಾತ್ ತಜ್ಜ್ಞಾನಮಿತ್ಯತ ಆಹ- ಅಣೀಯಾನಿತಿ । ಅಣುಪ್ರಮಾಣಾತ್, ಅಣುಪರಿಮಾಣವತೋ ಅಣೀಯಾನ್ ಅತಿಸೂಕ್ಷ್ಮಂ ಹಿ ಯತೋ ಅತೋ ನ ಪ್ರತ್ಯಕ್ಷಮ್ । ಅತರ್ಕ್ಯಂ ಚ ಅನುಮಾನಾಗೋಚರಂ ಚ । ಕೇವಲಾನುಮಾನಸ್ಯ ಪ್ರತಿಪಕ್ಷಾದಿಗ್ರಸ್ತತ್ವಾದಿತಿ ಭಾವಃ ॥ 8 ॥**

ನಚಿಕೇತನ ಈ ಪ್ರಶ್ನೆಗೆ ಯಮರಾಜನು ಉತ್ತರ ಹೇಳಿದನು.

ಪರಮಾತ್ಮನನ್ನು ಒಪ್ಪಿದ್ದರೂ ಅನೇಕರು ಸರಿಯಾದ ರೀತಿಯಿಂದ ಪರಮಾತ್ಮನನ್ನು ತಿಳಿದಿಲ್ಲ, ಆದುದರಿಂದ ಅವರಿಗೂ ಪರಮಾತ್ಮ ಪ್ರಾಪ್ತಿಯಾಗುವುದಿಲ್ಲ ಅದು ಹೇಗೆ ಎಂದರೆ ಹೇಳುತ್ತಾರೆ.

ಅಜ್ಞಾನಿಗಳಾದ ಅನೇಕ ಮನುಷ್ಯರು ಪರಮಾತ್ಮ ತತ್ತ್ವವನ್ನು ಹೇಳಲು ಪ್ರಯತ್ನ ಪಟ್ಟಿದ್ದಾರೆ. ಆದರೆ ಅವರು ಹೇಳುವ ರೀತಿಯಲ್ಲಿ ಪರಮಾತ್ಮನ ಸರಿಯಾದ ಜ್ಞಾನವು ಆಗುವುದಿಲ್ಲ, ಏಕೆಂದರೆ ಅವರು ಪರಮಾತ್ಮನನ್ನು ಸರ್ವೋತ್ತಮನೆಂದು ಪ್ರತಿಪಾದಿಸದಿರುವುದರಿಂದ ಅವರು ಹೇಳಿದ ರೀತಿಯಲ್ಲಿ ಮಾಡುವ ಉಪಾಸನೆಯು ಪರಮಾತ್ಮನ ಪ್ರಾಪ್ತಿಗೆ ಸಾಧನವಾಗುವುದಿಲ್ಲ, ಅವರಲ್ಲಿ ಕೆಲವರು ಮೂಲಪ್ರಕೃತಿಯೇ ಸರ್ವಕರ್ತೃಯೆಂದೂ, ಪುರುಷ ಅಂದರೆ ಈಶ್ವರನು ಅಪ್ರಧಾನವೆಂದೂ ಹೇಳುತ್ತಾರೆ. ಇನ್ನು ಕೆಲವರು ಈಶ್ವರನಿಗೆ ಮನುಷ್ಯರಂತೆಯೇ ಪ್ರಾಕೃತ ದೇಹವಿದೆಯೆಂದು

ಹೇಳುತ್ತಾರೆ. ಇನ್ನೂ ಕೆಲವರು ಇನ್ನೂ ಅನೇಕ ರೀತಿಯಿಂದ ಸರಿಯಾಗಿ ಪರಮಾತ್ಮನನ್ನು ತಿಳಿಯಲು ಸಾಧ್ಯವಾಗು-ವುದಿಲ್ಲವೆಂದ ಮೇಲೆ ಆ ರೀತಿಯ ಉಪಾಸನೆಯಿಂದ ಪರಮಾತ್ಮ ಪ್ರಾಪ್ತಿಯಾಗುವುದು ದೂರದಲ್ಲೇ ಉಳಿಯಿತು. ಅದ್ವೈತವಾದಿಗಳು ಹೇಳುವ ರೀತಿಯಿಂದಲಾದರೋ, ಪರಮಾತ್ಮನ ಸರಿಯಾದ ಜ್ಞಾನವಾಗುವುದು ಒತ್ತಟ್ಟಿಗಿರಲಿ, ಸಾಮಾನ್ಯ ಜ್ಞಾನವೂ ಆಗುವುದಿಲ್ಲ, ನಾನು ಬ್ರಹ್ಮನಿಗಿಂತ ಅಭಿನ್ನ, ನನಗೂ ಬ್ರಹ್ಮನಿಗೂ ಬೇಧವಿಲ್ಲ ಎಂದು ತಿಳಿಯುವ ಐಕ್ಯಜ್ಞಾನಿಯು ಹೇಳಿದ ಉಪದೇಶದಿಂದ ಪರಮಾತ್ಮನ ಸ್ವರೂಪಜ್ಞಾನವಾಗಲು ಸಾಧ್ಯವೇ ಇಲ್ಲ, ಸಾಮಾನ್ಯವಾದ ನಿರ್ವಿಕಲ್ಪಕಜ್ಞಾನವೂ ಆಗುವುದಿಲ್ಲ, ಹೀಗೆ ತತ್ತ್ವೋಪದೇಶ ಮಾಡುತ್ತೇವೆ ಎಂದು ಹೇಳುವ ದಾರ್ಶನಿಕರ ವಚನಗಳಿಂದ ಪರಬ್ರಹ್ಮನ ಜ್ಞಾನವಾಗದಿದ್ದರೂ ಪ್ರತ್ಯಕ್ಷ ಮತ್ತು ಅನುಮಾನ (ತರ್ಕ)ದಿಂದ ಪರಮಾತ್ಮನ ಜ್ಞಾನವಾಗಬಹುದಲ್ಲವೇ ಎಂದರೆ ಅದೂ ಇಲ್ಲ, ಆ ಪರಮಾತ್ಮನು ಲೋಕದಲ್ಲಿ ಅತ್ಯಂತ ಅಣು ಅಂದರೆ ಚಿಕ್ಕದು ಎಂದು ಹೇಳಿಸಿಕೊಳ್ಳುವ ಪರಮಾಣುವಿಗಿಂತಲೂ ಚಿಕ್ಕವನು. ಅವನನ್ನು ನಮ್ಮ ಇಂದ್ರಿಯಗಳಿಂದ ತಿಳಿಯಲು ಸಾಧ್ಯವಿಲ್ಲ, ಅನುಮಾನದಿಂದ ತಿಳಿಯಬಹುದಲ್ಲವೇ ಅಂದರೆ ಅದೂ ಸಾಧ್ಯವಿಲ್ಲ, ಏಕೆಂದರೆ ಕೇವಲ ಅನುಮಾನವನ್ನು ಪ್ರಯೋಗಿಸಿದರೆ ಅದಕ್ಕೆ ವಿರುದ್ಧ-ವಾಗಿಯೂ ಅನುಮಾನವನ್ನು ಪ್ರಯೋಗಿಸಲು ಸಾಧ್ಯವಾಗುತ್ತದೆ. ಅದುದರಿಂದ ಪರಮಾತ್ಮನನ್ನು ಅನುಮಾನದಿಂದ ತಿಳಿಯಲಾಗುವುದಿಲ್ಲ,

ಹಾಗಾದರೆ ಪರಮಾತ್ಮನನ್ನು ಹೇಗೆ ತಿಳಿಯಬೇಕು ಎಂದರೆ ಹೇಳುತ್ತಾರೆ :-

**ಅತರ್ಕ್ಯಮಿತ್ಯುಕ್ತಂ ವಿವೃಣ್ವನ್ ಬ್ರಹ್ಮಜ್ಞಾನೋಪಾಯಮಾಹ- ನೈಷೇತಿ ।**

**ನೈಷಾ ತರ್ಕೇಣ ಮತಿರಾಪನೇಯಾ**
**ಪ್ರೋಕ್ತಾ ಅನ್ಯೇನೈವ ಸುಜ್ಞಾನಾಯ ಪ್ರೇಷ್ಠ ।**
**ಯಾಂ ತ್ವಮಾಪಃ ಸತ್ಯಧೃತಿರ್ಬತಾಸಿ**
**ತ್ವಾದೃಙ್ ನೋ ಭೂಯಾತ್ ನಚಿಕೇತಃ ಪ್ರಷ್ಟಾ ॥ 9 ॥**

**ಏಷಾ ಬ್ರಹ್ಮಗೋಚರಾ ಮತಿಃ ತರ್ಕೇಣ, ಆ ಅಪೇತಿ ಪದಚ್ಛೇದಃ, ಆನೇಯಾ ಅಪನೇಯಾ ಚ ನ ಭವತಿ । ಕಿಂತು ಅನ್ಯೇನ ಬ್ರಹ್ಮಣಃ ಅನ್ಯೋ ಅಹಮಿತಿ ಜಾನತಾ ಪ್ರೋಕ್ತಾ ಮತಿಃ ತದುಪದೇಶಜನ್ಯಾ ಬುದ್ಧಿಃ ಸುಜ್ಞಾನಾಯ ಸಮ್ಯಕ್‌ಜ್ಞಾನಾಯ ಭವತಿ । ಹೇ ಪ್ರೇಷ್ಠ, ಪ್ರಿಯತಮೇತಿ ಸಂಬೋಧನಂ, ಹೇ ನಚಿಕೇತಃ, ಯಾಂ ಮತಿಂ ತ್ವಮಾಪಃ, ಆಪ್ಲೃ ವ್ಯಾಪ್ತೌ ಲುಙ್, ಪ್ರಾಪ್ತವಾನಸಿ, ಏಷಾ ಮತಿರಿತಿ ಪೂರ್ವೇಣ ಅನ್ವಯಃ । ತ್ವಂ ಸತ್ಯಧೃತಿಃ ಅಚಾಲ್ಯಧೈರ್ಯವಾನಸಿ । ಬತೇತ್ಯಾಶ್ಚರ್ಯೇ । ನಾನಾ-ಪ್ರಕಾರೇಣ ಪ್ರಲೋಭಿತೋಽಪಿ ಬ್ರಹ್ಮಸ್ವರೂಪಮತಿವಿಷಯೇ ಧೈರ್ಯಂ ನ ಮುಕ್ತ ವಾನಸಿ ಇತ್ಯೇತ-ದಾಶ್ಚರ್ಯಮಿತಿ ಭಾವಃ । ನಃ ಅಸ್ಮಾನ್ ಪ್ರಷ್ಟಾ ಪೃಚ್ಛಕಃ ತ್ವಾದೃಕ್ ನೋ ಭೂಯಾತ್ ನ ಭವೇನ್ನ ಸ್ಯಾದೇವೇತಿ ॥ 9 ॥**

ಪರಮಾತ್ಮವಿಷಯಕವಾದ ಇಂತಹ ಬುದ್ಧಿಯು ಯುಕ್ತಿಗಳಿಂದ ಉಂಟಾಗಲು ಸಾಧ್ಯವಿಲ್ಲ ಅಥವಾ ಯುಕ್ತಿಗಳಿಂದ ಪರಮಾತ್ಮ ವಿಷಯಕವಾದ ಬುದ್ಧಿಯನ್ನು ಹೋಗಲಾಡಿಸಲೂ ಸಾಧ್ಯವಿಲ್ಲ, ಪರಮಾತ್ಮನಿಗಿಂತ ನಾನು ಬೇರೆ ಎಂಬ

ಜ್ಞಾನವುಳ್ಳವನು (ಜೀವೇಶ್ವರ ಭೇದಜ್ಞಾನಿಯು) ಪರಮಾತ್ಮ ತತ್ತ್ವವನ್ನು ಉಪದೇಶಿಸಿದರೆ ಮಾತ್ರವೇ ಸರಿಯಾದ ಜ್ಞಾನ ಉಂಟಾಗುತ್ತದೆ. ಎಲೈ ಅತ್ಯಂತ ಪ್ರೀತಿಪಾತ್ರವಾದ ನಚಿಕೇತನೇ, ನಿನಗೆ ಈಗ ಬಂದಿರುವ ಈ ಬುದ್ಧಿಯು ಅತ್ಯಂತ ಶ್ಲಾಘನೀಯವಾದುದು. ನಿನ್ನ ಮನೋಧೈರ್ಯವು ಅಚಲವಾಗಿದೆ. ಇದು ಆಶ್ಚರ್ಯಕರವಾದ ವಿಷಯ. ನಮ್ಮಲ್ಲಿಗೆ ಅನೇಕ ವಿಷಯಗಳನ್ನು ಕೇಳುವ ಅನೇಕರು ಬರುತ್ತಾರೆ. ಆದರೆ ಅವರಲ್ಲಿ ಯಾವನೂ ನಿನ್ನಂತಹವನು ಇರಲಿಲ್ಲ. ಇನ್ನು ಮುಂದೆಯೂ ನಿನ್ನಂತಹ ಜಿಜ್ಞಾಸುವು ಸಿಗಲಾರನು.

**ತ್ವಯಾ ಪೃಷ್ಟಂ ಬ್ರಹ್ಮಸ್ವರೂಪಮಹಂ ಜಾನಾಮೀತ್ಯಾಹ ಯಮಃ- ಜಾನಾಮೀತಿ ॥**

**ಜಾನಾಮ್ಯಹಂ ಶೇವಧಿರಿತ್ಯನಿತ್ಯಂ**
**ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್ ।**
**ತತೋ ಮಯಾ ನಚಿಕೇತಶ್ಚಿತೋಽಗ್ನಿಃ**
**ಅನಿತ್ಯದ್ರವ್ಯೈಃ ಪ್ರಾಪ್ತವಾನಸ್ಮಿ ನಿತ್ಯಮ್ ॥ 10 ॥**

**ಅನಿತ್ಯಂ ಅಃ ಇತಿ ಬ್ರಹ್ಮ ಇತಿ ಶ್ರುತೇಃ 'ಅಕಾರಃ ಸರ್ವವಾಗಾತ್ಮಾ ಪರಬ್ರಹ್ಮಾಭಿಧಾಯಕಃ' ಇತಿ ಸ್ಮೃತೇಶ್ಚ ಅಕಾರೋ ಬ್ರಹ್ಮವಾಚೀ । ಅಕಾರವಾಚ್ಯಂ ಚ ತತ್ ನಿತ್ಯಂ ಚೇತಿ ಅನಿತ್ಯಮ್ । ಅಕಾರವಾಚ್ಯಂ ಬ್ರಹ್ಮ ನಿತ್ಯಂ ಶೇವಧಿಃ ನಿಧಿರಿತಿ ಜಾನಾಮ್ಯಹಮ್ । ಅನಿತ್ಯಮಿತ್ಯತ್ರ ಅ ಇತಿ ಭಿನ್ನಂ ಪದಂ ವಾ ನಪುಂಸಕಮ್ । ಅಕಾರನಾಮಕಂ ಬ್ರಹ್ಮ ನಿತ್ಯಂ ಶೇವಧಿಃ ನಿಧಿಸದೃಶಂ ಪರಮಪುರುಷಾರ್ಥಹೇತುರಿತಿ ಜಾನಾಮ್ಯಹಮ್ । ಧ್ರುವಂ ಶಾಶ್ವತಂ ಬ್ರಹ್ಮ ಅಧ್ರುವೈಃ ನ ವಿದ್ಯತೇ ಧ್ರುವಂ ಬ್ರಹ್ಮ ಯೇಷಾಂ ತೈಃ ಅಧ್ರುವೈಃ ಬ್ರಹ್ಮಜ್ಞಾನಭಕ್ತ್ಯಾದಿ ಹೀನೈಃ ನ ಪ್ರಾಪ್ಯತೇ ಹಿ ಯಸ್ಮಾತ್ ತಸ್ಮಾತ್ ಕಾರಣಾತ್ ಮಯಾ ಅನಿತ್ಯದ್ರವ್ಯೈಃ ಅಃ ಬ್ರಹ್ಮ ನಿತ್ಯಂ ಸದಾ ಯೇಷಾಂ ವಿಷಯತಯಾ ಅಸ್ತೀತಿ ವಾ, ಅಕಾರವಾಚ್ಯಂ ಬ್ರಹ್ಮರೂಪಂ ನಿತ್ಯಂ ವಸ್ತು ವಿಷಯತಯಾ ಯೇಷಾಮಸ್ತೀತಿ ವಾ, ತಾನಿ ಅನಿತ್ಯಾನಿ ಚ ತಾನಿ ದ್ರವ್ಯಾಣಿ ಚ ಮನಃಪ್ರಭೃತೀನಿ ತೈಃ ಅಗ್ನಿಃ ಇಷ್ಟಕಾಚಿತಿಸ್ಥೋಽಗ್ನಿಃ ಚಿತಃ । ತೇನ ಚ ನಿತ್ಯಂ ಶಾಶ್ವತಂ ಬ್ರಹ್ಮ ಆಪ್ತವಾನಸ್ಮಿ ಹೇ ನಚಿಕೇತ ಇತಿ ॥ 10 ॥**

ನಚಿಕೇತ ಕುಮಾರ ! ನೀನು ನನ್ನನ್ನು ಕುರಿತು ಬ್ರಹ್ಮಸ್ವರೂಪವನ್ನು ಕೇಳಿದ್ದೀಯಲ್ಲವೇ ? ಅದು ನನಗೆ ತಿಳಿದಿದೆ. ಆದುದರಿಂದಲೇ ನನಗೆ ತಿಳಿದ ವಿಷಯವನ್ನು ನಿನಗೆ ತಿಳಿಸಲು ಮುಂದಾಗುತ್ತಿದ್ದೇನೆ.

ಪರಬ್ರಹ್ಮವಸ್ತುವಿಗೆ ಅ ಎಂಬುದೂ ಒಂದು ಹೆಸರು. ಅ ಇತಿ ಬ್ರಹ್ಮ ಎಂಬ ವೇದವೂ ಅಕಾರಃ ಸರ್ವವಾಗಾತ್ಮಾ ಪರಬ್ರಹ್ಮಾಭಿಧಾಯಕಃ ಎಂಬ ಸ್ಮೃತಿಯೂ ಈ ವಿಷಯದಲ್ಲಿ ಪ್ರಮಾಣಗಳಾಗಿವೆ. ಅ ಎಂಬ ಹೆಸರುಳ್ಳ ಪರಬ್ರಹ್ಮವು ನಿತ್ಯವಾಗಿದೆ. ಅಂದರೆ ಎಂದಿಗೂ ನಾಶವಿಲ್ಲದ ವಸ್ತುವಾಗಿದೆ. ಅದು ಭಕ್ತರಿಗೆ ನಿತ್ಯವೂ ಸುಖವನ್ನು ಕೊಡತಕ್ಕನಿಧಿಯಾಗಿದೆ. ಪರಮಪುರುಷಾರ್ಥ ಅಂದರೆ ಮೋಕ್ಷವನ್ನು ಕೊಡತಕ್ಕ ಯೋಗ್ಯತೆಯುಳ್ಳವನು ಪರಬ್ರಹ್ಮನು ಮಾತ್ರವೇ ಹೊರತು ಇತರರು ಅಲ್ಲ. ಆ ಪರಬ್ರಹ್ಮವು ಶಾಶ್ವತವಾದುದು. ಪರಬ್ರಹ್ಮನಲ್ಲಿ ಯಾರಿಗೆ ಭಕ್ತಿ ಇಲ್ಲವೋ, ಪರಬ್ರಹ್ಮನ ಜ್ಞಾನವು ಯಾರಿಗೆ

ಇಲ್ಲವೋ, ಅವರಿಗೆ ಎಂದಿಗೂ ಆ ಪರಬ್ರಹ್ಮಪ್ರಾಪ್ತಿಯು ಆಗಲಾರದು. ಆದುದರಿಂದಲೇ ನಾನು ನಿತ್ಯದಲ್ಲಿಯೂ ಪರಬ್ರಹ್ಮ ವಿಷಯಕವಾಗಿರುವ ಮನಸ್ಸು ಮೊದಲಾದ ಇಂದ್ರಿಯಗಳಿಂದ ಆ ಪರಮಾತ್ಮನ ಪೂಜಾರೂಪವಾದ ಇಷ್ಟಕ ಚಯನ ಮುಂತಾದ ಕರ್ಮಗಳನ್ನು ಮಾಡಿ ಆ ಮೂಲಕ ಜ್ಞಾನಭಕ್ತಿವೈರಾಗ್ಯಾದಿಗಳನ್ನು ಸಂಪಾದಿಸಲು ಯತ್ನಿಸುತ್ತೇನೆ. ಅ ಎಂಬ ಹೆಸರುಳ್ಳ ನಿತ್ಯವಾದ ಪರಬ್ರಹ್ಮ ವಸ್ತುವನ್ನು ಯಾವಾಗಲೂ ವಿಷಯೀಕರಿಸಿರುವ ಇಂದ್ರಿಯಗಳಿಂದ ನಾನು ಕರ್ಮಗಳನ್ನು ಮಾಡಿ ಶಾಶ್ವತವಾದ ಪರಬ್ರಹ್ಮವನ್ನು ಹೊಂದಿದ್ದೇನೆ. ಎಲೈ ನಚಿಕೇತನೇ ! ಜ್ಞಾನಾರ್ಥಿಯು ಇದೇ ರೀತಿಯಾಗಿ ಕರ್ಮಗಳನ್ನು ಮಾಡತಕ್ಕದ್ದು.

**ನ ಕೇವಲಮಹಮೇವ ಜಾನಾಮಿ ಮತ್ಪ್ರಸಾದಾತ್ ತ್ವಮಪಿ ಜಾನಾಸೀತಿ ಭಾವೇನ ಪ್ರಾಗುಕ್ತಂ ಅನುವದತಿ- ಕಾಮಸ್ಯೇತಿ ॥**

**ಕಾಮಸ್ಯಾಪ್ತಿಂ ಜಗತಃ ಪ್ರತಿಷ್ಠಾಂ**
**ಕ್ರತೋರಾನಂತ್ಯಮಭಯಸ್ಯ ಪಾರಮ್ ।**
**ಸ್ತೋಮಮಹದುರುಗಾಯಂ ಪ್ರತಿಷ್ಠಾಂ**
**ದೃಷ್ಟ್ವಾ ಧೃತ್ಯಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ॥ 11 ॥**

**ಹೇ ನಚಿಕೇತಃ, ಧೀರಸ್ತ್ವಂ ಧೃತ್ಯಾ ಧೈರ್ಯೇಣ ಮನೋದಾರ್ಢ್ಯೇನ ಕಾಮಸ್ಯಾಪ್ತಿಂ ವಿತ್ತಾದೇಃ ಪ್ರಾಪ್ತಿಂ ಅತ್ಯಸ್ರಾಕ್ಷೀಃ ಅತ್ಯಂತಂ ತ್ಯಕ್ತವಾನಭೂಃ । ಕಥಂ ? ಜಗತಃ ಪ್ರತಿಷ್ಠಾಂ ಪ್ರತಿಷ್ಠಾಪಕಂ, ಕ್ರತೋ ಭಗವದೀಯಕರ್ಮಣಃ ಭಗವದೀಯಜ್ಞಾನಸ್ಯ ವಾ ಆನಂತ್ಯಂ ಆನಂತ್ಯಹೇತುಂ ಅಕ್ಷಯಫಲದಂ, ಅಭಯಸ್ಯ ಪಾರಂ ತೀರಂ ಅಭಯದಂ, ಸ್ತೋಮಮಹತ್ ಸ್ತೋಮಾಃ ಸ್ತೋತ್ರಸಾಧನಭೂತಾ ಮಂತ್ರಾಃ ತೇಭ್ಯೋ ಮಹತ್ ಮಹಾಂತಂ, ಸ್ತೋಮೈಃ ಸಾಕಲ್ಯೇನ್ ಪ್ರತಿಪಾದಯಿತುಮಶಕ್ಯಮಿತಿ ಯಾವತ್, ಉರುಭಿಃ ಬ್ರಹ್ಮಾದಿಭಿಃ ಮುಮುಕ್ಷುಭಿರ್ವಾ ಗೀಯತ ಇತಿ ಉರುಗಾಯಂ ಪ್ರತಿಷ್ಠಾಂ ಮುಕ್ತಾಶ್ರಯಂ ದೃಷ್ಟ್ವಾ ಜ್ಞಾತ್ವೇತಿ, ಉಕ್ತಗುಣವಿಶಿಷ್ಟಂ ವಿಷ್ಣುಂ ಜ್ಞಾತ್ವಾ ಕ್ಷುದ್ರಕಾಮಾವಾಪ್ತಿಂ ನ ಯಾಚಿತವಾನಿತಿ ಭಾವಃ । ಅನಂತಲೋಕಾಪ್ತಿಮಥೋ ಪ್ರತಿಷ್ಠಾಮಿತಿ ಪ್ರಾಗುಕ್ತದ್ವಯಸ್ಯ ಜಗತಃ ಪ್ರತಿಷ್ಠಾಂ ಕ್ರತೋರಾನಂತ್ಯಮಿತಿ ವಿಶೇಷಣದ್ವಯೇನ ಅನುವಾದಃ । ಸ್ವರ್ಗಲೋಕಾಃ ಅಮೃತತ್ವಂ ಭಜಂತೇ ಇತ್ಯುಕ್ತಸ್ಯ ಆಭಯಸ್ಯ ಪಾರಮಿತ್ಯನೇನಾನುವಾದಃ । ಬ್ರಹ್ಮಜಜ್ಞಂ ದೇವಮೀಡ್ಯಮಿತ್ಯಾದಿ-ನೋಕ್ತಂ ಸ್ತೋಮಮಹತ್ ಉರುಗಾಯಮಿತ್ಯನೇನ ಅನೂದಿತಮಿತಿ ಜ್ಞೇಯಮ್ ॥ 11 ॥**

ನಾನು ಪರಬ್ರಹ್ಮನನ್ನು ತಿಳಿದಿದ್ದೇನೆ ಎಂದಿಷ್ಟೇ ಅಲ್ಲ, ನನ್ನ ಅನುಗ್ರಹದಿಂದ ನೀನೂ ತಿಳಿಯುತ್ತೀ. ಏಕೆಂದರೆ ನೀನು ಹಿಂದೆ ನಾನು ಹೇಳಿರುವ ಅನೇಕ ಗುಣಗಳಿಂದ ಕೂಡಿದ ಪರಬ್ರಹ್ಮನನ್ನು ಸಾಮಾನ್ಯವಾಗಿ ತಿಳಿದುದರಿಂದಲೇ ಧೀರನಾಗಿ, ಮನಸ್ಸಿನ ದಾರ್ಢ್ಯದಿಂದ ಧನಕನಕಾದಿಗಳನ್ನು ನಾನು ಕೊಡುತ್ತೇನೆಂದರೂ ಒಪ್ಪಿಕೊಳ್ಳದೇ ಇದ್ದೆ. ಆ ಪರಬ್ರಹ್ಮವು ಜಗತ್ತಿನ ಸ್ಥಿತಿಗೆ ಕಾರಣವಾದುದು. ಪರಮಾತ್ಮನನ್ನು ಉದ್ದೇಶಿಸಿ ಮಾಡಿದ ಕರ್ಮಗಳಿಗೆ ಮತ್ತು ಪರಮಾತ್ಮನ ಜ್ಞಾನಕ್ಕೆ

ಅಕ್ಷಯವಾದ ಫಲವನ್ನು ಕೊಡುತ್ತದೆ. ಭಯವಿಲ್ಲದ ತೀರಪ್ರದೇಶವಾಗಿದೆ. ಅಂದರೆ ಅಭಯವೆಂಬ ಹೆಸರುಳ್ಳ ಮೋಕ್ಷವನ್ನೇ ಕೊಡುತ್ತದೆ. ಸ್ತೋತ್ರ ಮಾಡಲು ಬೇಕಾಗಿರುವ ಮಂತ್ರಗಳಿಂದಲೂ ಸಂಪೂರ್ಣವಾಗಿ ಅದನ್ನು ಹೊಗಳಲುಸಾಧ್ಯವಿಲ್ಲ. ಚತುರ್ಮುಖಬ್ರಹ್ಮನೇ ಮುಂತಾದ ಉತ್ತಮ ದೇವತೆಗಳಿಂದಲೂ, ಮೋಕ್ಷಾಪೇಕ್ಷೆಯುಳ್ಳ ಭಕ್ತರಿಂದಲೂ ಯಾವಾಗಲೂ ಆ ಪರಬ್ರಹ್ಮವಸ್ತುವು ಹೊಗಳಿಸಿಕೊಳ್ಳಲ್ಪಡುತ್ತದೆ. ಆ ಪರಬ್ರಹ್ಮನೇ ಮುಕ್ತರಿಗೂ ಆಶ್ರಯನಾಗಿದ್ದಾನೆ. ಇಂತಹ ಅನೇಕ ಗುಣಗಳಿಂದ ಕೂಡಿದ ಪರಬ್ರಹ್ಮನಾಮಕನಾದ ವಿಷ್ಣುವನ್ನು ತಿಳಿದುದರಿಂದಲೇ ನೀನು ಕ್ಷುದ್ರ ಕಾಮಗಳನ್ನು ಬೇಡಲಿಲ್ಲ (ಈ ಮಂತ್ರದಲ್ಲಿ ಹಿಂದಿನ ಮಂತ್ರಗಳಲ್ಲಿ ಹೇಳಿದ ವಿಷಯವನ್ನೇ ಅನುವಾದ ಮಾಡಿದ್ದಾರೆ. ಅನಂತಲೋಕಾಪ್ತಿಮಥೋ ಪ್ರತಿಷ್ಠಾಂ (ಪ್ರ. ವಲ್ಲೀ ಮಂತ್ರ 13) ಎಂದು ಹೇಳಿದ್ದನ್ನು ಜಗತಃ ಪ್ರತಿಷ್ಠಾಂ ಕ್ರತೋರಾನಂತ್ಯಂ ಎಂಬ ಎರಡು ವಿಶೇಷಣಗಳಿಂದ ಅನುವಾದ ಮಾಡಿದ್ದಾರೆ. ಸ್ವರ್ಗಲೋಕಾ ಅಮೃತತ್ವಂ ಭಜಂತೇ (ಪ್ರ. ವಲ್ಲೀ. ಮಂತ್ರ 12) ಎಂದು ಹೇಳಿದ್ದನ್ನು ಅಭಯಸ್ಯ ಪಾರಂ ಎಂದು ಅನುವಾದ ಮಾಡಿದ್ದಾರೆ. ಬ್ರಹ್ಮಜಜ್ಞಂ ದೇವಮೀಡ್ಯಂ (ಪ್ರ. ವಲ್ಲೀ ಮಂತ್ರ 16) ಇತ್ಯಾದಿಯಿಂದ ಹೇಳಿದ್ದನ್ನು ಸ್ತೋಮ ಮಹದುರುಗಾಯಂ ಎಂಬುದರಿಂದ ಅನುವಾದ ಮಾಡಿದ್ದಾರೆ ಎಂದು ತಿಳಿಯಬೇಕು.)

**ನ ಕೇವಲಂ ತ್ವಮೇವ ತ್ವದನ್ಯೋಽಪಿ ತಂ ದೃಷ್ಟ್ವಾ ತೃಪ್ತೋ ಭವತೀತ್ಯಾಹ- ತಮಿತಿ ॥**

**ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ**
**ಗುಹಾಹಿತಂ ಗಹ್ವರೇಷ್ಠಂ ಪುರಾಣಮ್ ।**
**ಅಧ್ಯಾತ್ಮಯೋಗಾಧಿಗಮೇನ ದೇವಂ**
**ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥ 12 ॥**

**ದುರ್ದರ್ಶಂ ಅತಿಪ್ರಯತ್ನೇನ ಜ್ಞೇಯಮ್ । ಗೂಢಂ ಅನಭಿವ್ಯಕ್ತಮ್ । ಅನುಪ್ರವಿಷ್ಟಂ, ಪ್ರೇರಕತಯಾ ಸರ್ವಜಗದಂತಃಪ್ರವಿಷ್ಟಮ್, ಗುಹಾಹಿತಂ ಸರ್ವಪ್ರಾಣಿಹೃದಯಗುಹಾಯಾಂ ಹಿತಂ ಸಂಸ್ಥಿತಮ್ । ಗಹ್ವರೇಷ್ಠಂ ಮುಕ್ತಜೀವೇ ಸ್ಥಿತಮ್ । ಸಂಸಾರ್ಯಗಮ್ಯತ್ವಾತ್ ಮುಮುಕ್ಷೋ ಗಹ್ವರೋ ಜ್ಞೇಯಃ । ಪುರಾಣಂ ಪುರಾತನಮ್ । ಅಧ್ಯಾತ್ಮಯೋಗೇನ ಧ್ಯಾನಯೋಗೇನ ಜಾತೋಽಧಿಗಮಃ, ತೇನ ದೇವಂ ಕ್ರಿಡಾದಿಗುಣವಿಶಿಷ್ಟಂ ಮತ್ವಾ ಜ್ಞಾತ್ವಾ ಧೀರೋ ಹರ್ಷಶೋಕೌ ಜಹಾತಿ । ಯಸ್ತು ಉಕ್ತಗುಣವಿಶಿಷ್ಟಂ ಭಗವಂತಂ ಧ್ಯಾನೋಪಾಯೇನ ಜ್ಞಾತ್ವಾ ಅಸ್ತೇ ಸ ಧೀರಃ ಕಾಮಪ್ರಾಪ್ತ್ಯಪ್ರಾಪ್ತಿಭ್ಯಾಂ ಹರ್ಷಶೋಕಯುಕ್ತೋ ನ ಭವತಿ । ಭಗವಜ್‌ಜ್ಞಾನೇನ ತೃಪ್ತಸ್ಸನ್ ಪರಮಾನಂದಭರಿತ ಏವಾಸ್ತ ಇತಿ ಭಾವಃ ॥ 12 ॥**

ನಚಿಕೇತ ! ನೀನೊಬ್ಬನೇ ಅಲ್ಲ, ನಿನ್ನಂತೆಯೇ ಇರುವ ಬೇರೊಬ್ಬನಾದರೂ ಧ್ಯಾನೋಪಾಯದಿಂದ ಪರಮಾತ್ಮನನ್ನು ಅಪರೋಕ್ಷೀಕರಿಸಿದರೆ ತೃಪ್ತಿಯನ್ನು ಹೊಂದುತ್ತಾನೆ. ಈ ತೃಪ್ತಿಯು ಸಾಮಾನ್ಯವಾದುದಲ್ಲ, ನಿರತಿಶಯವಾದ ಆನಂದವು.

ನಚಿಕೇತನೇ, ಪರಮಾತ್ಮನನ್ನು ತಿಳಿಯುವುದು ಸುಲಭವಲ್ಲ, ಅದಕ್ಕೆ ಬಹಳ ಹೆಚ್ಚಾದ ಪ್ರಯತ್ನ ಬೇಕು. ಆ ಪರಮಾತ್ಮನನ್ನು ತಿಳಿಯುವುದು ಏಕೆ ಕಷ್ಟ ಎಂದರೆ ಅವನು ಎಲ್ಲಾ ಜೀವರಲ್ಲಿಯೂ ಅವ್ಯಕ್ತನಾಗಿ ಭೂಮಿಯಲ್ಲಿ ಮರೆಯಾಗಿ

ನೀರು ಇರುವಂತೆ, ಬೀಜದಲ್ಲಿ ದೊಡ್ಡ ವೃಕ್ಷವಿರುವಂತೆ ಅಡಗಿರುತ್ತಾನೆ. ಅವನು ಪ್ರೇರಕನಾಗಿ ಸರ್ವ ಜಗತ್ತಿನ ಒಳಗೂ ಪ್ರವೇಶ ಮಾಡಿರುತ್ತಾನೆ. ಎಲ್ಲಾ ಪ್ರಾಣಿಗಳ ಹೃದಯಗುಹೆಯಲ್ಲಿ ವಿಶೇಷರೂಪದಿಂದ ಸನ್ನಿಹಿತನಾಗಿರುತ್ತಾನೆ. ಮುಕ್ತರಾದ ಜೀವರಲ್ಲಿಯೂ ಪರಮಾತ್ಮನು ನಿಯಾಮಕನಾಗಿ ಇರುತ್ತಾನೆ. ಸಂಸಾರಿಗಳಿಗೆ ಮುಕ್ತರು ಯಾರೆಂದು ತಿಳಿದು ಬರುವುದಿಲ್ಲ. ಆದರೂ ಮುಕ್ತರಲ್ಲಿಯೂ ಪರಮಾತ್ಮನು ಇದ್ದಾನೆಂಬುದು ಶ್ರುತಿ, ಸ್ಮೃತಿ, ಇತಿಹಾಸಾದಿಗಳಿಂದ ತಿಳಿದು ಬರುತ್ತದೆ. ಇಂತಹ ಪರಮಾತ್ಮನು ತಾನು ಬಹಳ ಪುರಾತನ ಅಂದರೆ ಅನಾದಿಯಾಗಿದ್ದಾನೆ. ಯಾವಾಗಲೂ ಕ್ರೀಡಾ ಅಂದರೆ ವಿಹಾರ ಮತ್ತು ವಿಜಿಗೀಷಾ ಅಂದರೆ ಉತ್ಕೃಷ್ಟನಾಗಿರುವ ಇಚ್ಛೆ ಇತ್ಯಾದಿಗಳಿಂದ ಕೂಡಿದ ಆ ಪರಮಾತ್ಮನನ್ನು ಶಾಸ್ತ್ರೋಕ್ತವಾದ ರೀತಿಯಿಂದ ಗುರೂಪದೇಶದಂತೆ ಧ್ಯಾನಿಸಬೇಕು. ಆ ಧ್ಯಾನದಿಂದ ಅಪರೋಕ್ಷಜ್ಞಾನ ಉಂಟಾಗುತ್ತದೆ. ಪ್ರಸನ್ನನಾದ ಪರಮಾತ್ಮನು ಜೀವನ ನಿರಂತರವಾದ ನಿತ್ಯಸ್ವರೂಪವಾದ ಆನಂದವನ್ನು ಪ್ರಕಟಗೊಳಿಸುತ್ತಾನೆ. ಹೀಗೆ ಹಿಂದೆ ಹೇಳಿದ ಗುಣಗಳಿಂದ ಕೂಡಿದ ಪರಮಾತ್ಮನನ್ನು ಧ್ಯಾನವೆಂಬ ಉಪಾಯದಿಂದ ತಿಳಿದಿರುವ ಧೀರನಿಗೆ ಇಷ್ಟಪ್ರಾಪ್ತಿಯಿಂದ ಸಂತೋಷವೂ, ಇಷ್ಟಪ್ರಾಪ್ತಿಯಾಗದೇ ಇದ್ದಾಗ ಶೋಕವೂ ಉಂಟಾಗುವುದಿಲ್ಲ. ಪರಮಾತ್ಮನ ಅಪರೋಕ್ಷ ಜ್ಞಾನದಿಂದ ತೃಪ್ತನಾದ ಆ ಜ್ಞಾನಿಯು ಯಾವಾಗಲೂ ಪರಮಾನಂದಭರಿತನಾಗಿಯೇ ಇರುತ್ತಾನೆ.

**ಏತಜ್‌ಜ್ಞಾನಂ ಕೇನ ಭವತೀತ್ಯತೋ ಮಹತಾಮುಪದೇಶೇನೇತ್ಯಾಹ- ಏತಮಿತಿ ।**

**ಏತಚ್ಛ್ರುತ್ವಾ ಸಂಪರಿಗೃಹ್ಯ ಮರ್ತ್ಯಃ**
**ಪ್ರವೃಹ್ಯ ಧರ್ಮ್ಯಮಣುಮೇನಮಾಪ್ಯ ।**
**ಸ ಮೋದತೇ ಮೋದನೀಯಂ ಹಿ ಲಬ್ಧ್ವಾ**
**ವಿವೃತಂ ಸದ್ಮ ನಚಿಕೇತಸಂ ಮನ್ಯೇ ॥ 13 ॥**

**ಯೋ ಮರ್ತ್ಯಃ ಏತದ್ ಬ್ರಹ್ಮ ಮಹದ್ಭ್ಯಃ ಶ್ರುತ್ವಾ ಧರ್ಮ್ಯಂ ಜಗದ್ಧಾರಕಂ ಅಣುಂ ಸೂಕ್ಷ್ಮಂ ಭಗವಂತಂ ಪ್ರವೃಹ್ಯ ಜೀವಾತ್ ಪೃಥಕ್ಕೃತ್ಯ ಸಂಪರಿಗೃಹ್ಯ ಸಮ್ಯಕ್ ಜ್ಞಾತ್ವಾ ಜೀವಾತ್ ಭೇದೇನ ಮುಕ್ತಜೀವೇ ಸ್ಥಿತಂ ಜ್ಞಾತ್ವಾಽಽಸ್ತೇ ಸ ಏನಂ ಭಗವಂತಂ ಆಪ್ಯ ಮೋದತೇ । ಹಿ ಯತೋ ಮೋದ-ನೀಯಂ ಲಬ್ಧ್ವಾ ಆಸ್ತೇ ಅತ ಇತಿ ಯೋಜನಾ । ಯದ್ವಾ, ಮೋದನಿಯಂ ಏನಂ ಪ್ರಾಪ್ಯ ಮೋದತೇ ಹಿ ಯತಃ ಆತೋ ಲಬ್ಧ್ವಾ ಏನಮಿತ್ಯನುಷಂಗಃ । ಏನಂ ಭಗವಂತಂ ಲಬ್ಧ್ವಾ ಜ್ಞಾತ್ವಾ ಸ್ಥಿತಂ ನಚಿ-ಕೇತಸಂ ಪ್ರತಿ ಸದ್ಮವೈಕುಂಠದ್ವಾರಂ ವಿವೃತಂ ಪ್ರಕಟಿತಂ ಮನ್ಯೇ ಜಾನಾಮಿ । ಬ್ರಹ್ಮಜ್ಞಾನಿನಾ ತ್ವಯಾ ಸರ್ವಕಾಮತ್ಯಾಗೇನ ವಿಶೇಷತೋ ಬ್ರಹ್ಮಜ್ಞಾನಸ್ಯಾರ್ಥ್ಯಮಾನತ್ವಾತ್ ಪ್ರಶಸ್ತಸ್ತ್ವಮಿತಿ ಭಾವಃ ॥ 13 ॥**

ಇಂತಹ ಪರಮಾತ್ಮನ ಜ್ಞಾನವು ಯಾವುದರಿಂದ ಉಂಟಾಗುತ್ತದೆ ಎಂದು ನಾವು ಇಲ್ಲಿ ಪ್ರಶ್ನಿಸಬಹುದಲ್ಲವೇ ?

ಮಹಾತ್ಮರ ಉಪದೇಶದಿಂದಲೇ ಉಂಟಾಗುತ್ತದೆ ಎಂದು ಯಮಧರ್ಮರಾಜನು ಉತ್ತರ ಕೊಡುತ್ತಿದ್ದಾನೆ.

ಮನುಷ್ಯನು ಮಹಾತ್ಮರಿಂದ ಪರಬ್ರಹ್ಮವಿಷಯಕವಾದ ಜ್ಞಾನೋಪದೇಶವನ್ನು ಕೇಳಬೇಕು. ಸರಿಯಾಗಿ ತಿಳಿದು-ಕೊಳ್ಳಬೇಕು. ಸಮಸ್ತ ಜಗತ್ತಿಗೂ ಧಾರಕನಾದ ಪರಮಾತ್ಮನು ಬಹಳ ಸೂಕ್ಷ್ಮನಾಗಿದ್ದಾನೆ.

ಅವನು ಸಂಸಾರಿಗಳಾದ ಮತ್ತು ಮುಕ್ತರಾದ ಜೀವರಿಗಿಂತ ಭಿನ್ನವಾಗಿದ್ದಾನೆಂದು ಸರಿಯಾಗಿ ತಿಳಿದುಕೊಳ್ಳಬೇಕು. ಹೀಗೆ ಜೀವೇಶ್ವರಭೇದಜ್ಞಾನಿಯಾದವನಿಗೆ ಮಾತ್ರವೇ ಸರಿಯಾದ ಅಪರೋಕ್ಷಜ್ಞಾನ ಉಂಟಾಗುತ್ತದೆ. ಅಂತಹ ಜ್ಞಾನಿಯು ಪರಮಾತ್ಮನನ್ನು ಹೊಂದಿ ಸಂತೋಷಪಡುತ್ತಾನೆ.

ಪರಮಾತ್ಮನನ್ನು ಹೊಂದಿದವನಿಗೆ ಏಕೆ ಸಂತೋಷವಾಗುತ್ತದೆ. ಅದಕ್ಕೆ ಕಾರಣವೇನು ? ಎಂದು ಕೇಳಿದರೆ ಉತ್ತರವು ಅಲ್ಲಿಯೇ ಸಿದ್ಧವಾಗಿದೆ. ತಾನು ಸ್ವತಃ ಆನಂದಸ್ವರೂಪಿಯಾದುದರಿಂದ, ಆ ಪರಮಾತ್ಮನು ತನ್ನನ್ನು ಅಪರೋಕ್ಷಿಕರಿಸಿಕೊಂಡ ಜ್ಞಾನಿಗೆ ಪ್ರಸನ್ನನಾಗಿ ಆನಂದವನ್ನು ಕೊಡುತ್ತಾನೆ. ಇಂತಹ ಮಹಾಮಹಿಮಗುಣಶಾಲಿಯಾದ ಪರಮಾತ್ಮನನ್ನು ತಿಳಿದಿರುವ ನಿನಗೆ ವೈಕುಂಠಲೋಕದ ಬಾಗಿಲು ತೆರೆದಿದೆಯೆಂದು ನಾನು ತಿಳಿಯುತ್ತೇನೆ. ಬ್ರಹ್ಮಜ್ಞಾನವನ್ನು ಮಾತ್ರ ಅಪೇಕ್ಷಿಸುತ್ತಿದ್ದೀಯೆ, ಆದ್ದರಿಂದ ಪ್ರಶಸ್ತನಾದ ಅಧಿಕಾರಿಯಾಗಿದ್ದೀಯೆ.

**ಅಲಂ ಮತ್ಪ್ರಶಂಸಯಾ ತತ್ತ್ವಂ ಬ್ರೂಹೀತ್ಯಾಹ ನಚಿಕೇತಾಃ- ಅನ್ಯತ್ರೇತಿ ।**

**ಅನ್ಯತ್ರ ಧರ್ಮಾದನ್ಯತ್ರಾಧರ್ಮಾತ್**
**ಅನ್ಯತ್ರಾಸ್ಮಾತ್ ಕೃತಾಕೃತಾತ್ ।**
**ಅನ್ಯತ್ರ ಭೂತಾಚ್ಚ ಭವ್ಯಾಚ್ಚ**
**ಯತ್ತತ್ ಪಶ್ಯಸಿ ತದ್ವದ ॥ 14 ॥**

**ಧರ್ಮಾದನ್ಯತ್ರ ಅಧರ್ಮಾಧನ್ಯತ್ರ ಧರ್ಮಾಧರ್ಮಹೀನಮಿತಿ ಯಾವತ್ । ಅಸ್ಮಾತ್ ಪ್ರಮಿತಾತ್ ಕೃತಾಕೃತಾತ್, ದ್ವಂದ್ವೈಕವದ್ಭಾವಃ, ಕಾರ್ಯಾತ್ ಕಾರಣಾಚ್ಚಾನ್ಯತ್ರ ಅನ್ಯತ್ ತದುಭಯವಿಲಕ್ಷಣಮಿತಿ ಯಾವತ್ । ಭೂತಾಚ್ಚಾತೀತಾತ್ ಭವ್ಯಾಚ್ಚಾಗಾಮಿನಶ್ಚ ಅನ್ಯತ್ರ ತದುಭಯವಿಲಕ್ಷಣಮಿತಿ ಯಾವತ್ । ಕೃತಾಕೃತಾದಿತ್ಯಸ್ಯ ವಿವರಣಂ ವಾ ಭೂತಾಚ್ಚೇತ್ಯಾದಿ । ತತ್ ಲೋಕವಿಲಕ್ಷಣತಯಾ ಪ್ರಸಿದ್ಧಂ ಯತ್ ಯದ್ವಸ್ತು ಪಶ್ಯಸಿ ಜಾನಾಸಿ ತದ್ವದ ಮಹ್ಯಮಿತ್ಯರ್ಥಃ ॥ 14 ॥**

ಯಮನು ಮಾಡಿದ ಪ್ರಶಂಸೆಯನ್ನು ಕೇಳಿ ನಚಿಕೇತನು ಹೇಳಲಾರಂಭಿಸಿದನು. ಯಮಧರ್ಮರಾಜನೇ, ಪರಬ್ರಹ್ಮವು ಪುಣ್ಯಾಪಾಪ ಲೇಪರಹಿತವಾದುದು ಎಂದು ನಾವು ಕೇಳುತ್ತೇವೆ. ಹಾಗೆಯೇ ಆ ಪರಬ್ರಹ್ಮವಸ್ತುವು ಶಾಸ್ತ್ರಗಳಿಂದ ನಾವು ಸರಿಯಾಗಿ ತಿಳಿದಿರುವ ಕಾರ್ಯಕಾರಣವಸ್ತುಗಳಿಗಿಂತ ವಿಲಕ್ಷಣವಾದುದು. ಕಳೆದುಹೋದ ಮತ್ತು ಅಗಲಿರುವ ವಸ್ತುಗಳಿಗಿಂತಲೂ ವಿಲಕ್ಷಣವೆಂದು ಹೇಳಬೇಕಾಗಿಯೇ ಇಲ್ಲವಷ್ಟೆ ? ಇಂತಹ ಸಮಸ್ತವಸ್ತು ವಿಲಕ್ಷಣವೆಂದು ಪ್ರಸಿದ್ಧವಾದ ಪರಬ್ರಹ್ಮವಸ್ತುವನ್ನು ನೀನು ತಿಳಿದಿರುವಿಯಷ್ಟೇ ? ಅದನ್ನು ನನಗೆ ಹೇಳು.

**ಪೃಷ್ಟಂ ಬ್ರಹ್ಮಸ್ವರೂಪಂ ವಕ್ತುಂ ತನ್ಮಹಿಮೋಕ್ತಿಪೂರ್ವಕಂ ಪ್ರತಿಜಾನೀತೇ- ಸರ್ವ ಇತಿ ॥**

**ಸರ್ವೇ ವೇದಾ ಯತ್ಪದಮಾಮನಂತಿ**
**ತಪಾಂಸಿ ಸರ್ವಾಣಿ ಚ ಯದ್ವದಂತಿ ।**

**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ।**
**ತತ್ತೇ ಪದಂ ಸಂಗ್ರಹೇಣ ಬ್ರವೀಮಿ ॥ ಓಮಿತ್ಯೇತತ್ ॥ 15 ॥**

**ಆಮನಂತಿ ಮುಖ್ಯವೃತ್ತ್ಯಾ ಬೋಧಯಂತಿ । ಯತ್ಪದಂ ಯಸ್ಯ ಸ್ವರೂಪಮ್ । ಯತ್ಪ್ರತಿ ಯದುದ್ದಿಶ್ಯ ಯತ್ಪ್ರೀತ್ಯರ್ಥಂ ಸರ್ವಾಣಿ ತಪಾಂಸಿ ಕರ್ಮಾಣಿ ವೇದಾಃ ವದಂತಿ, ಯದಿಚ್ಛಂತೋ ಯತ್ಪ್ರೀತಿಮಿಚ್ಛಂತೋ ಮಹಾಂತಃ ಬ್ರಹ್ಮಚರ್ಯಂ ಬ್ರಹ್ಮಗೋಚರಶ್ರವಣಾದಿಕಂ ಊರ್ಧ್ವರೇತಸ್ತ್ವಾದಿ-ವ್ರತಂ ವಾ ಚರಂತಿ ಅನುತಿಷ್ಠಂತಿ । ತತ್ಪದಂ ತೇ ತುಭ್ಯಂ ಸಂಗ್ರಹೇಣ ಸಂಕ್ಷೇಪೇಣ ಬ್ರವೀಮೀತಿ । ಏವ-ಮುಕ್ತೋ ನಚಿಕೇತಾ ಅಹ – ಓಮಿತ್ಯೇತದಿತಿ । ಏತತ್ ತ್ವಯಾ ಬ್ರವೀಮೀತಿ ಪ್ರತಿಜ್ಞಾತಂ ಬ್ರಹ್ಮಸ್ವರೂಪಂ ಇತಿ 'ಸರ್ವೇ ವೇದಾ' ಇತಿ ತ್ವದುಕ್ತಪ್ರಕಾರೇಣ ಓಂ ಭವತ್ಯೇವೇತ್ಯಂಗೀಕಾರಾರ್ಥ ಓಂಕಾರಃ । ಯದ್ವಾ ತತ್ಪದಮಿತ್ಯುಕ್ತಂ ಪದಂ ಕಿಮಿತ್ಯತ ಉಕ್ತಂ ಓಮಿತಿ । ಏತತ್ಪದಂ ಓಮಿತ್ಯುಚ್ಯತ ಇತ್ಯರ್ಥಃ ॥ 15 ॥**

ಯಮ :- ನಚಿಕೇತನೇ, ಆಗಬಹುದು. ನೀನು ಕೇಳಿದ ಪರಬ್ರಹ್ಮ ಸ್ವರೂಪವನ್ನು ನಾನು ಈಗಲೇ ಹೇಳಲಿದ್ದೇನೆ. ಆದರೆ ಅದಕ್ಕೂ ಮೊದಲು ಆ ಪರಬ್ರಹ್ಮನ ಮಹಿಮೆಯನ್ನು ಒಂದಿಷ್ಟು ಹೇಳುತ್ತೇನೆ ಕೇಳು.

ಕೃತಾಂತದೇವನು ನಚಿಕೇತನು ಕೇಳಿದ ಬ್ರಹ್ಮಸ್ವರೂಪವನ್ನು ಹೇಳುವುದಕ್ಕೋಸ್ಕರ ಮೊದಲು ಆ ಬ್ರಹ್ಮವಸ್ತುವಿನ ಮಹಿಮೆಯನ್ನು ಹೇಳುತ್ತಾ ಮುಂದೆ ಹೇಳಲಿರುವ ವಿಷಯದ ಪ್ರತಿಜ್ಞೆಯನ್ನು ಮಾಡುತ್ತಾನೆ.

ಋಗ್ವೇದ ಮೊದಲಾದ ಎಲ್ಲಾ ವೇದಗಳೂ ಮುಖ್ಯವಾದ ವೃತ್ತಿಯಿಂದ ಆ ಪರಬ್ರಹ್ಮಸ್ವರೂಪವನ್ನೇ ತಿಳಿಸುತ್ತವೆ. ವೇದಗಳು ಆ ಪರಮಾತ್ಮನ ಪ್ರೀತಿಗೋಸ್ಕರವೇ ಅಂದರೆ ಪರಮಾತ್ಮ ಪ್ರಸಾದವೆಂಬ ಒಂದು ಮುಖ್ಯ ಫಲವನ್ನು ಉದ್ದೇಶವಾಗಿಟ್ಟುಕೊಂಡೇ ಎಲ್ಲಾ ಕೃಚ್ಛ್ರಚಾಂದ್ರಾಯಣ ಮುಂತಾದ ವ್ರತಗಳನ್ನು ಅಗ್ನಿಷ್ಟೋಮ ದರ್ಶಪೂರ್ಣಮಾಸಾದಿ ಯಾಗಗಳನ್ನು ವಿಧಿಸುತ್ತವೆ. ಪರಬ್ರಹ್ಮನಲ್ಲಿಯೇ ಮನಸ್ಸಿಟ್ಟು, ಅನೇಕ ನಿಯಮಗಳನ್ನು ಕೈಗೊಂಡಿರುವ ಬ್ರಹ್ಮಚಾರಿಗಳು ಆ ಪರಮಾತ್ಮನ ಪ್ರೀತಿಗಾಗಿಯೇ ಇಂದ್ರಿಯಗಳನ್ನು ನಿಗ್ರಹಿಸಿ ಊರ್ಧ್ವರೇತಸ್ಕರಾಗಿರುತ್ತಾರೆ. ಸಂನ್ಯಾಸಿಗಳೂ ಇದೇ ರೀತಿಯಿಂದ ಇಂದ್ರಿಯಗಳನ್ನು ನಿಗ್ರಹಿಸಿ ಊರ್ಧ್ವರೇತಸ್ಕರಾಗಿರುತ್ತಾರೆ. ಸಂನ್ಯಾಸಿಗಳು ಈ ರೀತಿಯ ಇಂದ್ರಿಯ ನಿಗ್ರಹದ ಜೊತೆಗೆ ಶ್ರವಣ ಮನನ ನಿದಿಧ್ಯಾಸನವೆಂಬ ನಿಯಮಗಳನ್ನು ಇತರರಿಗಿಂತ ವಿಶೇಷವಾಗಿ ಅನುಷ್ಠಾನ ಮಾಡುತ್ತಾರೆ. ಇಂತಹ ಪರಬ್ರಹ್ಮನಿಗೆ ಓಂ ಎಂದು ಹೆಸರು, ಎಂದು ಯಮಧರ್ಮರಾಜನು ಹೇಳಿದಾಗ ನಚಿಕೇತನು ಹೀಗೆ ಹೇಳಿದನು.

ಹೌದು, ನೀನು ಹೇಳುತ್ತೇನೆಂದು ಪ್ರತಿಜ್ಞೆ ಮಾಡಿದ ಪರಬ್ರಹ್ಮಸ್ವರೂಪವು ಮೇಲೆ ಹೇಳಿದ ಗುಣಗಳಿಂದ ಕೂಡಿರುತ್ತದೆ ಎಂಬ ವಿಷಯದಲ್ಲಿ ಸಂದೇಹವಿಲ್ಲ, ನಾನು ಅದನ್ನು ಸಂಪೂರ್ಣವಾಗಿ ಒಪ್ಪಿಕೊಂಡಿರುತ್ತೇನೆ.

**ಬ್ರಹ್ಮಸ್ವರೂಪಂ ವಿವಕ್ಷುಃ ತಜ್ಜ್ಞಾನಿನಃ ಫಲಂ ಮಹಿಮೋಕ್ತಿಪೂರ್ವಕಮಾಹ ಏತದ್ಧ್ಯೇವೇತಿ ।**

**ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಮ್ ।**
**ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥ 16 ॥**

**ಏತತ್ ತ್ವಯಾ ಪೃಷ್ಟಮಕ್ಷರಂ ಅವಿನಾಶಿ ಬ್ರಹ್ಮೈವ । ಏತದೇವ ಪರಂ ಅಕ್ಷರಂ ಪರಮಾಕ್ಷರ-ನಾಮಕಮ್ । ಹಿಶಬ್ದೌ ಉಭಯತ್ರ ಪ್ರಸಿದ್ಧಿದ್ಯೋತಕೌ ।**

**ಯೋऽಧಿಕಾರೀ ಜ್ಞಾತ್ವಾ ಯದಿಷ್ಟಮಿಚ್ಛತಿ ಕಾಮಯತೇ ತಸ್ಯ ತದಿಷ್ಟಂ ಭವತ್ಯೇವೇತ್ಯರ್ಥಃ ॥ 16 ॥**

ಯಮದೇವನು ಹೇಳುತ್ತಾನೆ.

ನಚಿಕೇತನೇ, ಬ್ರಹ್ಮಸ್ವರೂಪವನ್ನು ಹೇಳುವುದಕ್ಕೆ ಮೊದಲು ಆ ಪರಬ್ರಹ್ಮನನ್ನು ತಿಳಿದವನಿಗೆ ಆಗುವ ಫಲವನ್ನು ಪರಬ್ರಹ್ಮನ ಮಹಿಮೆಯನ್ನೂ ಹೇಳುತ್ತೇನೆ ಕೇಳು. ನೀನು ಹೇಳಿದಂತಹ ಬ್ರಹ್ಮವಸ್ತುವಿಗೆ ನಾಶವಿಲ್ಲ. ಈ ಪರಬ್ರಹ್ಮ ವಸ್ತುವಿಗೆ ಪರಮಾಕ್ಷರ ಎಂದು ಹೆಸರು. ಈ ಎರಡೂ ವಿಷಯಗಳೂ ಶ್ರುತಿಸ್ಮೃತಿ ಪ್ರಸಿದ್ಧಗಳಾಗಿವೆ. ಯಾವ ಅಧಿಕಾರಿಯೂ ಪರಬ್ರಹ್ಮನ ಸ್ವರೂಪವನ್ನು ಈ ರೀತಿಯಾಗಿ ತಿಳಿದು ಯಾವ ವಸ್ತುವನ್ನು ಬಯಸುತ್ತಾನೋ ಅದು ಅವನಿಗೆ ಸಿಗುತ್ತದೆ. ಈ ವಿಷಯದಲ್ಲಿ ಸಂಶಯವೇ ಇಲ್ಲ ॥ 16 ॥

**ಏತದಾಲಂಬನಂ ಶ್ರೇಷ್ಠಂ ಏತದಾಲಂಬನಂ ಪರಮ್ ।**
**ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ॥ 17 ॥**

**ಏತತ್ ತ್ವಯಾ ಪೃಷ್ಟಂ ಶ್ರೇಷ್ಠಮಾಲಂಬನಂ ಸರ್ವೇಷಾಂ ಮುಖ್ಯಾಶ್ರಯಂ ಪರಮಾಲಂಬನಂ ವಿಲಕ್ಷಣಾಶ್ರಯಮ್ । ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ಭಗವಲ್ಲೋಕೇ ಪೂಜ್ಯತ ಇತಿ ॥ 17 ॥**

ನೀನು ಕೇಳಿದಂತಹ ಈ ಬ್ರಹ್ಮಸ್ವರೂಪವು ಎಲ್ಲಾ ಪ್ರಪಂಚಕ್ಕೆ ಇರುವ ಎಲ್ಲಾ ಆಧಾರಗಳಿಗಿಂತಲೂ ಶ್ರೇಷ್ಠವಾದ ಆಧಾರವು. ಅದು ಎಲ್ಲಾ ಆಧಾರಗಳಿಗಿಂತ ವಿಲಕ್ಷಣವಾದುದು. ಇಂತಹ ಪರಬ್ರಹ್ಮವೆಂಬ ಆಧಾರವನ್ನು ತಿಳಿದವನು ಪರಬ್ರಹ್ಮನ ಪ್ರಸಾದದಿಂದ ಮುಕ್ತನಾಗಿ, ಆ ಭಗವಂತನ ಲೋಕದಲ್ಲಿ ತನಗಿಂತ ಅವರರಾದ (ತಾರತಮ್ಯದಲ್ಲಿ ಕೆಳಗೆ ಇರುವ) ಮುಕ್ತಜೀವರಿಂದ ಪೂಜಿತನಾಗಿ ಪರಮಾನಂದವನ್ನು ಅನುಭವಿಸುತ್ತಾನೆ.

**ಬ್ರಹ್ಮಲೋಕಸ್ಥಃ ಪುನಃ ಕಥಂಭೂತ ಇತ್ಯತೋ ಜನ್ಮಾದಿಹೀನಶ್ಚೇತ್ಯಾಹ- ನ ಜಾಯತ ಇತಿ ।**

**ನ ಜಾಯತೇ ಮ್ರಿಯತೇ ವಾ ವಿಪಶ್ಚಿ-**
**ನ್ನಾಯಂ ಕುತಶ್ಚಿನ್ನ ಬಭೂವ ಕಶ್ಚಿತ್ ।**
**ಅಜೋ ನಿತ್ಯಶ್ಶಾಶ್ವತೋऽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇऽಪಿ ದೇಹೇ ॥ 18 ॥**

**ನೇತ್ಯಗ್ರೇऽಪ್ಯನ್ವೇತಿ । ವಿಪಶ್ಚಿತ್ ಜ್ಞಾನೀ ದೇಹಯೋಗವಿಯೋಗಲಕ್ಷಣಜನಿಮೃತಿಯುಕ್ತೋ ನ ಭವತಿ । ಕುತ ಇತ್ಯತೋ ಹೇತುದ್ವಯಮಾಹ- ನಾಯಮಿತಿ । ನ ಬಭೂವೇತಿ ಚ । ಅಯಂ ಭಗವಾನ್**

**ಕುತಶ್ಚಿದಪಿ ನ ಜಾಯತೇ ನ ಮ್ರಿಯತ ಇತ್ಯನುಕರ್ಷಃ । ಭಗವತೋ ಜನ್ಮಮೃತಿಹೀನತ್ವಾತ್ ತಾದೃಶ-ಭಗವದ್ವಿಪಶ್ಚಿತೋಽಪಿ ದೇಹಯೋಗವಿಯೋಗರೂಪಜನ್ಮಮೃತೀ ನ ಸ್ತ ಇತಿ । ಸ್ವರೂಪತೋ ಜನ್ಮಾ-ದ್ಯಭಾವಾಚ್ಚ ನೋಕ್ತರೂಪಜನ್ಮಮೃತೀ ಜ್ಞಾನಿನ ಇತಿ ಭಾವೇನ ಹೇತೋರಸಿದ್ಧಿನಿರಾಸಾಯ ತತ್ಸಾಧ-ಯಿತುಂ ಸ್ವರೂಪೇಣ ಜನನಂ ಬಂಧವೇಲಾಯಾಮಪಿ ನಾಸ್ತಿ ಕಿಮುತ ಮುಕ್ತಾವಿತ್ಯತ ಆಹ- ನ ಬಭೂವ ಕಶ್ಚಿದಿತ್ಯಾದಿ । ಅಯಂ ಜೀವಃ ಪುರಾಣಃ ಪುರಂ ದೇಹಮಣತಿ ಗಚ್ಛತೀತಿ ಪುರಾಣಃ । ದೇಹಬಂಧಯುಕ್ತಃ ಸನ್ನಪಿ ಅಜೋ ನಿತ್ಯಃ ಸ್ವರೂಪೇಣ ಜನ್ಮಮೃತಿಹೀನಃ । ಶಾಶ್ವತಶ್ಚ ಅವಿಕಾರಶ್ಚ । ಕಿಮು ಮುಕ್ತೌ ಕಶ್ಚಿದಪಿ ನ ಬಭೂವ ಸ್ವರೂಪೇಣ ನ ಜಾಯತ ಇತಿ । ನ ನಶ್ಯತೀತ್ಯುಪಲಕ್ಷ್ಯತೇ । ಜೀವಸ್ಯ ಕದಾಪಿ ಸ್ವರೂಪೇಣ ಜನ್ಮಮೃತ್ಯೋರಭಾವಾತ್ ದೇಹಯೋಗಾದಿನೈವ ಜನ್ಮಾದೇರ್ವಾಚ್ಯತ್ವಾತ್ ಸರ್ವಥಾ ದೇಹಬಂಧಾತ್ ಮುಕ್ತಿದಶಾಯಾಂ ಕಥಂ ದೇಹಯೋಗಾದಿರೂಪಜನ್ಮಮೃತೀ ವಿಪಶ್ಚಿತಃ ಸ್ಯಾತಾಂ ಇತಿ ನ ಬಭೂವ ಕಶ್ಚಿದಿತ್ಯನೇನೋಕ್ತಸ್ಯ ಸ್ವರೂಪತೋ ಜನ್ಮಾದ್ಯಭಾವಸ್ಯ ನ ಜಾಯತೇ ನ ಮ್ರಿಯತ ಇತ್ಯುಕ್ತಾರ್ಥೇ ಹೇತುತ್ವಂ ಬೋಧ್ಯಮ್ । ಯದ್ವಾ ನ ಬಭೂವ ಕಶ್ಚಿದಿತ್ಯನೇನೈವ ಕದಾಽಪಿ ಸ್ವರೂಪೇಣ ನ ಬಭೂವ ನ ನಶ್ಯತೀತಿ ನ ಜಾಯತ ಇತ್ಯಾದೌ ಉಕ್ತೇಽರ್ಥೇ ಸ್ವರೂಪಾಜನನಾದಿಹೇತುಮುಕ್ತ್ವೋಪಸಂಹರತಿ ಸ್ವರೂಪಸ್ಯಾನಾದಿನಿತ್ಯತ್ವಮಜೋ ನಿತ್ಯ ಇತ್ಯಾದಿನಾ । ಪ್ರಾಗ್ವದೇವೇತ್ಯರ್ಥಃ । ನನು ಪುರಾಣತ್ವೇ ದೇಹಹಾನಿರಸ್ತಿ ಕಿಮಿತ್ಯತೋ ನೇತ್ಯಾಹ- ನ ಹನ್ಯತ ಇತಿ ॥ 18 ॥**

ಬ್ರಹ್ಮಲೋಕಕ್ಕೆ ಹೋದವನು ಪುನಃ ಹುಟ್ಟು ಸಾವು ಮುಂತಾದವುಗಳಿಗೆ ಒಳಗಾಗುತ್ತಾನೆಯೇ ಎಂದರೆ ಇಲ್ಲವೆಂದು ಹೇಳುತ್ತಾರೆ.

ಬ್ರಹ್ಮಾಪರೋಕ್ಷಜ್ಞಾನವನ್ನು ಹೊಂದಿದ ಮುಕ್ತನು ಪುನಃ ಜನ್ಮ ಮರಣಗಳನ್ನು ಹೊಂದುವುದಿಲ್ಲ. ಹೊಸ ದೇಹದ ಸಂಬಂಧ ಹಳೇದೇಹದ ವಿಯೋಗ ಇವೆರಡೂ ಜ್ಞಾನಿಗೆ ಇರುವುದಿಲ್ಲ ಎಂದು ಅಭಿಪ್ರಾಯ. ಜ್ಞಾನಿಗೆ ಇವೆರಡೂ ಇಲ್ಲದಿರುವುದಕ್ಕೆ ಕಾರಣವೇನು ? ಎಂಬ ಪ್ರಶ್ನೆಯು ಇಲ್ಲಿ ಉದ್ಭೂತವಾಗುತ್ತದೆ. ಅದಕ್ಕೆ ಇಲ್ಲಿಯೇ ಉತ್ತರವನ್ನು ಕೊಟ್ಟಿದ್ದಾರೆ. ಜೀವನಿಗೆ ಮೋಕ್ಷವನ್ನು ಕೊಡತಕ್ಕ ಪರಮಾತ್ಮನು ಯಾರಿಂದಲೂ ಯಾವ ರೀತಿಯಿಂದಲೂ ಜನ್ಮ ಮರಣವನ್ನು ಹೊಂದುವುದಿಲ್ಲ. ಅಂದಮೇಲೆ ಅಂತಹ ಪರಮಾತ್ಮನನ್ನು ತಿಳಿದ ಜ್ಞಾನಿಗೂ ಜನ್ಮ ಮರಣಗಳು ಉಂಟಾಗುವುದಿಲ್ಲವೆಂದು ಹೇಳಲೇಬೇಕಾಗುತ್ತದೆ.

ಇನ್ನೊಂದು ರೀತಿಯಿಂದ ವಿಚಾರ ಮಾಡಿದಾಗಲೂ ಜ್ಞಾನಿಗೆ ಜನನ ಮರಣಗಳಿಲ್ಲವೆಂದು ತಿಳಿದುಬರುತ್ತದೆ. ಜೀವಾತ್ಮನಿಗೆ ಈ ಸಂಸಾರ ಬಂಧನ ಅವಸ್ಥೆಯಲ್ಲಿಯೂ ಸ್ವರೂಪದಿಂದ ಜನ್ಮವಿಲ್ಲ. ಮುಕ್ತಿಯಲ್ಲಿ ಜನನ ಮರಣಗಳಿಲ್ಲವೆಂದು ಹೇಳತಕ್ಕದ್ದೇನಿದೆ.

ಈ ಜೀವನು ಸಂಸಾರಾವಸ್ಥೆಯಲ್ಲಿ ದೇಹದಿಂದ ದೇಹಕ್ಕೆ ಹೋಗುತ್ತಾ ದೇಹಬಂಧವೆಂಬ ಸಂಸಾರದಿಂದ ಕೂಡಿರುತ್ತಾನೆ. ಆದರೂ ಅಜ ಅಂದರೆ ಸ್ವರೂಪದಿಂದ ಜನ್ಮಹೀನನೂ, ನಿತ್ಯ, ಅಂದರೆ ಸ್ವರೂಪದಿಂದ ಮರಣಹೀನನೂ ಆಗಿರುತ್ತಾನೆ. ಮತ್ತು ಶಾಶ್ವತ ಅಂದರೆ ವಿಕಾರರಹಿತನೂ ಆಗಿರುತ್ತಾನೆ. ಹೀಗಿರುವಾಗ ಮುಕ್ತಿಯಲ್ಲಿ ಯಾವ ಜೀವನೂ

ಸ್ವರೂಪದಿಂದ ಹುಟ್ಟುವುದಿಲ್ಲ, ಸಾಯುವುದೂ ಇಲ್ಲ, ಹೀಗೆ ಜೀವನಿಗೆ ಯಾವ ಕಾಲದಲ್ಲಿಯೂ ಸ್ವರೂಪದಿಂದ ಜನ್ಮ ಮರಣವಿಲ್ಲದಿರುವುದರಿಂದ ದೇಹಸಂಬಂಧ ಮತ್ತು ವಿಯೋಗಗಳಿಂದಲೇ ಜನ್ಮ ಮರಣಗಳನ್ನು ಹೇಳಬೇಕಾಗಿದೆ. ಮುಕ್ತಿಯಾದರೆ ಎಲ್ಲ ರೀತಿಯಿಂದಲೂ ದೇಹ ಸಂಬಂಧದ ಬಿಡುಗಡೆಯಾಗುತ್ತದೆ. ಎಂದ ಮೇಲೆ ದೇಹಯೋಗ-ವಿಯೋಗರೂಪವಾದ ಜನನ ಮರಣಗಳೂ ಜ್ಞಾನಿಗೆ ಹೇಗೆ ಉಂಟಾದಾವು ? ಒಟ್ಟಿನಲ್ಲಿ ಸ್ವರೂಪತಃ ಜನ್ಮಮರಣ-ರಹಿತನಾದ ಜ್ಞಾನಿಗೆ ಮುಕ್ತಿಯಲ್ಲಿ ಜನ್ಮಮರಣಗಳಿಲ್ಲವೆಂದು ಹೇಳತಕ್ಕದ್ದೇನಿದೆ ?

ಹಾಗಾದರೆ ಈ ಜೀವನು ಕೊಲ್ಲುವವನು, ಈ ಜೀವನು ಕೊಲ್ಲಲ್ಪಟ್ಟವನು ಎಂಬ ಲೋಕವ್ಯವಹಾರವು ಹೇಗೆ ಕೂಡುತ್ತದೆ ?

**ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ 19 ॥**

**ನನ್ವೇವಂ ಹಂತಾ ಹತಶ್ಚಾಹಮಿತಿ ಪ್ರತೀತಿಃ ಕಥಮಿತ್ಯತೋ ಭ್ರಾಂತಿರಿತ್ಯಾಹ- ಹಂತೇತಿ । ಜೀವ-ಸ್ವಭಾವಂ ಹಂತುಮಿತಿ ಯೋಜ್ಯಮ್ । ನ ವಿಜಾನೀತ ಇತಿ । ಜೀವಸ್ವರೂಪಸ್ಯ ನಿತ್ಯತ್ವಾದಿತಿ ಭಾವಃ । ॥ 19 ॥**

ಈ ಪ್ರಶ್ನೆಗೆ ಉತ್ತರವನ್ನು ಯಮದೇವನು ಹೇಳುತ್ತಿದ್ದಾನೆ.

ಒಬ್ಬ ಜೀವನು ನಾನು ಕೊಲ್ಲುತ್ತಿದ್ದೇನೆ ಎಂಬ ಅಭಿಮಾನವನ್ನು ತಾಳಿರುತ್ತಾನೆ. ಆದರೆ ಅವನಿಂದ ಕೊಲ್ಲಲ್ಪಡಲು ಸಾಧ್ಯವಾದ ವಸ್ತು ಯಾವುದು ? ಜಡಶರೀರವೇ ಅಥವಾ ಆತ್ಮನೇ ? ಜೀವನಿಗೆ ನಾಶಮಾಡಲು ಸಾಧ್ಯವಾದ ವಸ್ತುವು ಜಡಶರೀರವೇ ಹೊರತು ನಿತ್ಯನಾದ ಆತ್ಮನಲ್ಲ. ಹೀಗಿದ್ದರೂ ನಿತ್ಯವಾದ ಜೀವಸ್ವಭಾವವನ್ನು ನಾನು ನಾಶಮಾಡುತ್ತೇನೆ ಎಂದು ತಿಳಿಯುವವನು ಭ್ರಾಂತನೇ ಸರಿ. ಹಾಗೆಯೇ ನಾನು ಅಂದರೆ ಜೀವ ಸ್ವರೂಪವೇ ನಾಶವಾಯಿತು ಎಂದು ತಿಳಿಯುವುದು ಭ್ರಾಂತಿಯಾಗಿದೆ. ಇವರಿಬ್ಬರೂ ಅಜ್ಞಾನಿಗಳು ಮತ್ತು ಅನ್ಯಥಾ ಜ್ಞಾನಿಗಳು. ಏಕೆಂದರೆ ಜೀವನು ನಿತ್ಯನಾದುದರಿಂದ ಒಬ್ಬ ಜೀವನು ಇನ್ನೊಬ್ಬ ಜೀವನನ್ನು ಕೊಲ್ಲಲಾರನು ॥ 19 ॥

**ಏವಮುಪದಿಶ್ಯಮಾನಬ್ರಹ್ಮಜ್ಞಾನಿನಃ ಫಲಮುಕ್ತ್ವಾ ಪ್ರೇತಜೀವನಿಯಂತೃಬ್ರಹ್ಮೋಪದಿಶತಿ - ಅಣೋರಣೀಯಾನಿತಿ ॥**

**ಅಣೋರಣೀಯಾನ್ ಮಹತೋ ಮಹೀಯಾನ್**
**ಆತ್ಮಾಽಸ್ಯ ಜಂತೋರ್ನಿಹಿತೋ ಗುಹಾಯಾಮ್ ।**
**ತಮಕ್ರತುಃ ಪಶ್ಯತಿ ವೀತಶೋಕೋ**
**ಧಾತುಃ ಪ್ರಸಾದಾನ್ಮಹಿಮಾನಮಾತ್ಮನಃ ॥ 20 ॥**

**ಅಸ್ಯ ನ ಬಭೂವೇತ್ಯಾದಿನೋಕ್ತದಿಶಾ ಅನಾದಿನಿತ್ಯಸ್ಯ ಜಂತೋರ್ಜೀವಸ್ಯ ಗುಹಾಯಾಂ ಹೃದಿ ಪ್ರೇರಕತಯಾ ನಿಹಿತೋ ನಿತರಾಂ ಸ್ಥಿತ ಇತಿ । ಏತದಾಲಂಬನಂ ಜ್ಞಾತ್ವೇತ್ಯುಕ್ತೈತಜ್ಜ್ಞಾನಸ್ಯ ಪ್ರಥಮ-ಭಾವಿಸಾಧನಮಾಹ- ತಮಿತಿ । ತಂ ಅಣೀಯಸ್ತ್ವಾದ್ಯುಕ್ತಾ ಗುಣಯುಕ್ತಂ ಆತ್ಮನಃ ಸ್ವಸ್ಮಾತ್ ಮಹಿಮಾನಂ ಮಹಾಂತಂ ಮಹಾಗುಣಪರಿಮಾಣಂ ಅಕ್ರತುಃ ಅಕಾರವಾಚ್ಯವಿಷ್ಣುವಿಷಯಕಕ್ರತುಶಬ್ದಿತನಿಶ್ಚಯವಾನ್ ಧಾತುಃ ಹರೇಃ ಪ್ರಸಾದಾತ್ ಪಶ್ಯತಿ ಧ್ಯಾನದ್ವಾರಾ ಸಾಕ್ಷಾತ್ಕರೋತಿ । ತತಶ್ಚ ವೀತಶೋಕೋ ಭವತಿ । ॥ 20 ॥**

ಹಿಂದಿನ ಮಂತ್ರಗಳಲ್ಲಿ ಮುಂದೆ ಉಪದೇಶಿಸಲ್ಪಡುವ ಬ್ರಹ್ಮಸ್ವರೂಪವನ್ನು ಸರಿಯಾಗಿ ತಿಳಿಯುವ ಜ್ಞಾನಿಗೆ ಫಲವನ್ನು ಹೇಳಿದ್ದಾಯಿತು. ಈಗ ಮೃತನಾದ ಜೀವನಿಗೆ ನಿಯಾಮಕನಾದ ಬ್ರಹ್ಮಸ್ವರೂಪವನ್ನು ಹೇಳುತ್ತಾರೆ.

ಆತ್ಮಾ ಅಂದರೆ ಪರಮಾತ್ಮನು, ಅತ್ಯಂತ ಸೂಕ್ಷ್ಮವಾದ ಪರಮಾಣ್ವಾದಿ ಪದಾರ್ಥಗಳಿಗಿಂತಲೂ ಸೂಕ್ಷ್ಮನು. ಅತ್ಯಂತ ಮಹತ್ತಾದ ಆಕಾಶಾದಿ ಪದಾರ್ಥಗಳಿಗಿಂತಲೂ ಹೆಚ್ಚಾದ ಮಹತ್ತ್ವವುಳ್ಳವನು. ಹೀಗೆ ಅಣುತ್ವ ಅಂದರೆ ಅತ್ಯಂತ ಚಿಕ್ಕದಾಗಿರುವಿಕೆ, ಮಹತ್ವ ಅಂದರೆ ಎಲ್ಲದಕ್ಕಿಂತಲೂ ದೊಡ್ಡದಾಗಿರುವಿಕೆ ಎಂಬ ಎರಡು ವಿರುದ್ಧವಾದ ಗುಣಗಳು ಅಚಿಂತ್ಯಾದ್ಭುತ ಶಕ್ತಿಯಿಂದ ಪರಮಾತ್ಮನಲ್ಲಿ ಇರುತ್ತವೆ ಎಂದು ತಿಳಿಯಬೇಕು. ಜೀವನ ಉತ್ಪತ್ತಿನಾಶರಹಿತನು ಮತ್ತು ಅಣುವಾದವನು. ಇಂತಹ ಜೀವನ ಹೃದಯ ಗುಹೆಯಲ್ಲಿ ಮಹತ್ತಮನಾದ ಪರಮಾತ್ಮನು ಪ್ರೇರಕನಾಗಿ ಅಸಂಕುಚಿತವಾದ ರೀತಿಯಲ್ಲಿ ಇದ್ದಾನೆ. ಇವನೇ ಮೃತ ಮತ್ತು ಮುಕ್ತಜೀವರಿಗೆ ನಿಯಾಮಕನು.

ಪರಬ್ರಹ್ಮವು ಎಲ್ಲರಿಗೂ ಶ್ರೇಷ್ಠವಾದ ಆಶ್ರಯವು, ಅದುದರಿಂದ ಅದನ್ನು ತಿಳಿದು ಮುಕ್ತನಾದ ಜೀವನು ಆ ಪರಬ್ರಹ್ಮವನ್ನೇ ಆಶ್ರಯಿಸಿರುತ್ತಾನೆ. ಮತ್ತು ಬ್ರಹ್ಮಲೋಕದಲ್ಲಿ ತನಗಿಂತ ಕೆಳಗಿನ ಮುಕ್ತಜೀವರಿಂದ ಪೂಜಿಸಲ್ಪಡುತ್ತಾನೆ.

ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ಎಂದು ಈ ವಿಷಯವನ್ನು ಹಿಂದೆಯೇ ಹೇಳಿದ್ದಾರೆ. ಆದರೆ ಆ ಬ್ರಹ್ಮಾಪರೋಕ್ಷ ಜ್ಞಾನಕ್ಕೆ ಮೊಟ್ಟಮೊದಲನೆಯ ಮೆಟ್ಟಲು ಯಾವುದು ಎಂಬ ಪ್ರಶ್ನೆಗೂ ಇಲ್ಲಿ ಉತ್ತರವಿದೆ.

ಹಿಂದೆ ಹೇಳಿದಂತೆ ಅಣುವಿಗಿಂತಲೂ ಅಣು, ಮಹತ್ತಿಗಿಂತಲೂ ಮಹತ್ತಾದ ಆ ಪರಬ್ರಹ್ಮವು ಜೀವನಂತೆ ಅಲ್ಪಗುಣವುಳ್ಳದ್ದಲ್ಲ, ಅನಂತಾನಂತ ಗುಣಗಳುಳ್ಳದ್ದು. ಆ ಪರಬ್ರಹ್ಮ ವಸ್ತುವಿನ ಗುಣಗಳ ಪರಿಮಾಣವು ಅಥವಾ ಸಂಖ್ಯೆಯು ಇಷ್ಟೆಂದು ಹೇಳಲು ಸಾಧ್ಯವಿಲ್ಲ. ಈ ಪರಬ್ರಹ್ಮ ವಸ್ತುವಿಗೆ ಸರ್ವತ್ರ ವ್ಯಾಪ್ತವಾದುದರಿಂದ ವಿಷ್ಣು ಎಂದೂ ಹೆಸರು, ಅ ಎಂದೂ ಹೆಸರು ಅ ಎಂಬ ಹೆಸರುಳ್ಳ ವಿಷ್ಣುವನ್ನು ಸರಿಯಾಗಿ ತಿಳಿಯಬೇಕು. ಅನಂತರ ಗುರುಗಳು ಹೇಳಿದ ರೀತಿಯಿಂದ ಧ್ಯಾನಿಸಬೇಕು. ಆಗ ಪರಮಾತ್ಮನು ನಮ್ಮಲ್ಲಿ ಪ್ರಸನ್ನನಾಗಿ ಹೃದಯಕಮಲದಲ್ಲಿ ಪ್ರತ್ಯಕ್ಷನಾಗುತ್ತಾನೆ. ಅನಂತರ ಈ ಜೀವವನ್ನು ಸಂಸಾರದಿಂದ ಬಿಡಿಸುತ್ತೇನೆ ಎಂಬ ಪರಮಾತ್ಮನ ಇಚ್ಛಾರೂಪವಾದ ಪ್ರಸಾದವು ನಮ್ಮಲ್ಲಿ ಉಂಟಾಗುತ್ತದೆ. ಆಗ ಆ ಜೀವನ ಸಮಸ್ತ ಶೋಕಗಳು ದೂರವಾಗುತ್ತವೆ. ಆ ಜೀವನು ಮುಕ್ತನಾಗುತ್ತಾನೆ ॥ 20 ॥

**ಪುನಶ್ಚ ಭಗವತೋ ಮಹಿಮಾನಮೇವಾಹ – ಆಸೀನ ಇತಿ ।**

**ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ ।**
**ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥ 21 ॥**

**ಸಾಮರ್ಥ್ಯಾತಿಶಯಾದೇವ ಆಸೀನ ಇತ್ಯಾದಿ ವಿರುದ್ಧಧರ್ಮವತ್ತ್ವಂ ತಸ್ಯ ಜ್ಞೇಯಮ್ । ಮದಾಮದಂ ಮದಶ್ಚಾಮದಶ್ಚ ಸುಖಮಸುಖಂ ತತೋ ಭವತೀತಿ ಮದಾಮದಂ ಸುಖಾಸುಖಹೇತುಂ ತಂ ದೇವಂ ಮದನ್ಯಃ ಕಃ ಜ್ಞಾತುಮರ್ಹತಿ ॥ 21 ॥**

ಯಮದೇವನು ಭಗವಂತನ ಮಹಿಮೆಯನ್ನು ಮತ್ತೂ ಹೇಳುತ್ತಿದ್ದಾನೆ.

ಪರಮಾತ್ಮನು ಒಂದು ಕಡೆ ಕುಳಿತಿದ್ದಂತೆಯೇ ದೂರಕ್ಕೆ ಹೋಗುತ್ತಾನೆ. ಒಂದು ಕಡೆ ಮಲಗಿದ್ದಂತೆಯೇ ಎಲ್ಲಾ ಕಡೆಗಳಲ್ಲಿಯೂ ಸಂಚರಿಸುತ್ತಾನೆ. ಲೋಕದಲ್ಲಿ ಕುಳಿತಿದ್ದವನು ಆ ಸ್ಥಳದಲ್ಲಿಯೇ ಇದ್ದುಕೊಂಡು ದೂರಕ್ಕೆ ಹೋಗಲು ಸಾಧ್ಯವಿಲ್ಲ. ಆದರೆ ಪರಮಾತ್ಮನಲ್ಲಿ ಸಮಸ್ತ ಪ್ರಪಂಚಕ್ಕಿಂತಲೂ ಅತಿಶಯವಾದ ಸಾಮರ್ಥ್ಯವಿರುವುದರಿಂದ ಇದು ಸಾಧ್ಯವಾಗುತ್ತದೆ. ಯಮನು, ಹೇಳುತ್ತಿದ್ದಾನೆ :-

ಸಮಸ್ತ ಜೀವವರ್ಗಕ್ಕೂ ಸುಖದುಃಖಗಳನ್ನು ಕೊಡತಕ್ಕ ಆ ಪರಮಾತ್ಮನನ್ನು ನನ್ನ ಹೊರತು ಬೇರೆ ಯಾವನು ಸರಿಯಾಗಿ ತಿಳಿದುಕೊಳ್ಳಬಲ್ಲನು ? (ಕಃ ಜ್ಞಾತುಮರ್ಹತಿ = ಯಾವನು ತಿಳಿದುಕೊಳ್ಳಬಲ್ಲನು ? ನನಗಿಂತ ತಾರತಮ್ಯದಲ್ಲಿ ಕೆಳಗಿನವರು ನನ್ನಷ್ಟು ತಿಳಿಯಲಾರರು. (ಮದನ್ಯಃಕಃ=ನನಗಿಂತ ಬೇರೆಯಾಗಿರುವ ಬ್ರಹ್ಮದೇವರು) ಮಾತ್ರ ನನಗಿಂತ ಚೆನ್ನಾಗಿ ತಿಳಿಯಬಲ್ಲರು. ॥ 21 ॥

**ಪುನಸ್ತನ್ಮಹಿಮೋಕ್ತಿಪೂರ್ವಕಂ ತಜ್ಜ್ಞಾನಿನಃ ಫಲಮಾಹ- ಅಶರೀರಮಿತಿ ।**

**ಅಶರೀರಂ ಶರೀರೇಷು ಅನವಸ್ಥೇಷ್ವವಸ್ಥಿತಮ್ ।**
**ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ 22 ॥**

**ಅನವಸ್ಥೇಷು ನಶ್ವರೇಷು ಶರೀರೇಷು ಪ್ರಾಣಿದೇಹೇಷು ಅಶರೀರಂ ತತ್ಶರೀರನಿಮಿತ್ತಕವಿಕಾರರಹಿತತಯಾಽವಸ್ಥಿತಂ ಮಹಾಂತಂ ದೇಶಕಾಲಗುಣತೋ ಮಹಾಂತಂ ವಿಭುಂ ಸಮರ್ಥಮಾತ್ಮಾನಂ ಸ್ವಾಮಿನಂ ಮತ್ವಾ ಧೀರೋ ನ ಶೋಚತಿ ಮುಕ್ತೋ ಭವತಿ ॥ 22 ॥**

ಯಮದೇವನಿಗೆ ಪರಮಾತ್ಮನ ಮಹಿಮೆಯನ್ನು ಹೇಳಿದಷ್ಟೂ ತೃಪ್ತಿಯಿಲ್ಲ. ಆದುದರಿಂದ ಪುನಃ ಪರಮಾತ್ಮನ ಮಹಿಮೆಯನ್ನು ಹೇಳುತ್ತಾ, ಇಂತಹ ಪರಮಾತ್ಮನನ್ನು ತಿಳಿದವರಿಗೆ ಆಗುವ ಫಲವನ್ನು ಹೇಳುತ್ತಾರೆ.

ನಚಿಕೇತನೇ ! ಪ್ರಾಣಿಗಳ ಶರೀರಗಳು ನಶ್ವರವಾಗಿವೆ. ಏಕೆಂದರೆ ಅವು ಪ್ರಾಕೃತವಾದವುಗಳು. ಶರೀರವು ನಾಶವಾಗುವಾಗ ಪ್ರಾಣಿಗಳಿಗೆ ದುಃಖಾದಿ ವಿಕಾರಗಳು ಉಂಟಾಗುತ್ತವೆ. ಪರಮಾತ್ಮನು ತಾನು ಅಪ್ರಾಕೃತ ಶರೀರವುಳ್ಳವನಾದ್ದರಿಂದ ಎಲ್ಲಾ ಪ್ರಾಣಿಗಳ ಶರೀರದಲ್ಲಿದ್ದರೂ ಶರೀರನಾಶದಿಂದ ಉಂಟಾಗುವ ವಿಕಾರರಹಿತನಾಗಿರುತ್ತಾನೆ. ಅವನು ಅನಂತ ದೇಶಗಳಲ್ಲಿಯೂ, ಅನಂತಕಾಲದಲ್ಲಿಯೂ ವ್ಯಾಪ್ತನಾಗಿರುತ್ತಾನೆ. ಅವನ ಗುಣಗಳಿಗೆ ಪರಿಮಿತಿಯಿಲ್ಲ. ಅವನು ಎಲ್ಲರಿಗಿಂತಲೂ ಸಮರ್ಥನು. ಎಲ್ಲರಿಗೂ ಸ್ವಾಮಿಯು ಇಂತಹ ಪರಮಾತ್ಮನನ್ನು ತಿಳಿದ ಜ್ಞಾನಿಯು ಹಿಂದೆ ಹೇಳಿದ ರೀತಿಯಿಂದ ಶೋಕವನ್ನೆಲ್ಲಾ ಕಳೆದುಕೊಂಡು ಮುಕ್ತನಾಗುತ್ತಾನೆ ॥ 22 ॥

ನನು ಶ್ರವಣಾದ್ಯುಪಾಯೇನಾಪಿ ತಜ್‌ಜ್ಞಾನಸಂಭವಾತ್ ಧಾತುಃ ಪ್ರಸಾದಾತ್ ತಂ ಪಶ್ಯತೀತ್ಯನು-ಪಪನ್ನಮಿತ್ಯತ ಆಹ - ನಾಯಮಿತಿ ॥

ನಾಯಮಾತ್ಮಾ ಪ್ರವಚನೇನ ಲಭ್ಯಃ
ನ ಮೇಧಯಾ ನ ಬಹುನಾ ಶ್ರುತೇನ ।
ಯಮೇವೈಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ॥ 23 ॥

ಪ್ರವಚನೇನ ವ್ಯಾಖ್ಯಾನೇನ ಲಭ್ಯೋ ದರ್ಶನೀಯೋ ನ ಭವತಿ । ನ ಮೇಧಯಾ ಸ್ವಕೀಯ-ಪ್ರಜ್ಞಾಬಲೇನ ನ ಲಭ್ಯಃ । ಬಹುನಾ ಶ್ರುತೇನ ಶ್ರವಣೇನ ನ ಲಭ್ಯಃ । ಕಿಂತು ಯಂ ಏಷಃ ಭಗವಾನ್ ವೃಣುತೇ ಸ್ವೀಕರೋತಿ, ಯಸ್ಮೈ ಪ್ರಸೀದತೀತಿ ಯಾವತ್, ತೇನೈವ ಲಭ್ಯೋ ದರ್ಶನೀಯಃ । ಕಥಂ ? ತಸ್ಯ ಪ್ರಸಾದವಿಷಯಸ್ಯ ಏಷ ಆತ್ಮಾ ಸ್ವಾಂ ತನುಂ ವಿವೃಣುತೇ ಪ್ರದರ್ಶಯತೀತಿ, ಕಥಮನ್ಯಥಾ ಅವ್ಯಕ್ತೈಕಸ್ವರೂಪಸ್ಯ ತತ್ಪ್ರಸಾದೇನ ವಿನಾ ಅಪರೋಕ್ಷತೇತಿ ಭಾವಃ । ತಥಾ ಚ ಸೂತ್ರಂ 'ಅತೋಽನಂತೇನ ತಥಾ ಹಿ ಲಿಂಗಮ್' (ಬ್ರ.ಸೂ. 3-2-27) ಇತಿ ॥ 23 ॥

ಪ್ರ :- ಹಿಂದೆ ಪರಮಾತ್ಮನು ಪ್ರಸನ್ನನಾದರೆ ಮಾತ್ರವೇ ಅವನ ಅಪರೋಕ್ಷಜ್ಞಾನವಾಗಬಹುದೇ ಹೊರತು ನಮ್ಮ ಪ್ರಯತ್ನದಿಂದ ಅವನು ಪ್ರತ್ಯಕ್ಷನಾಗುವುದಿಲ್ಲವೆಂದು ಹೇಳಿದಿರಿ. ಅದು ಸರಿಯಲ್ಲವೆಂದು ನನಗೆ ತೋರುತ್ತದೆ. ಶ್ರುತಿಗಳಲ್ಲಿ ಹೇಳಿದಂತೆ ಶ್ರವಣ (ಗುರುಗಳ ಮೂಲಕ ಶಾಸ್ತ್ರವನ್ನು ಅಧ್ಯಯನ ಮಾಡುವುದು) ಮನನ (ತಿಳಿದ ವಿಷಯಗಳನ್ನು ಯುಕ್ತಿಗಳಿಂದ ನಿರ್ಧರಿಸುವುದು). ನಿದಿಧ್ಯಾಸನ (ಧ್ಯಾನ) ಇವುಗಳಿಂದ ಪರಮಾತ್ಮನ ಅಪರೋಕ್ಷಜ್ಞಾನವಾಗಲು ಸಾಧ್ಯ-ವಿದೆಯಲ್ಲವೇ ?

ಉ:- ಇಲ್ಲ, ಪರಮಾತ್ಮನ ಅಪರೋಕ್ಷ ಜ್ಞಾನವು ಅವನು ಇಚ್ಛಿಸಿದರೆ ಮಾತ್ರ ಆಗುವುದೇ ಹೊರತು ನಮ್ಮ ಯಾವ ಪ್ರಯತ್ನದಿಂದಲೂ ಆಗುವುದಿಲ್ಲ ಕೇಳು.

ಪರಮಾತ್ಮನನ್ನು ವ್ಯಾಖ್ಯಾನಕೌಶಲದಿಂದ ಪ್ರಸನ್ನವಾಗಿ ಮಾಡಿ, ಪ್ರತ್ಯಕ್ಷಮಾಡಿಕೊಳ್ಳಲು ಬರುವುದಿಲ್ಲ, ಅಥವಾ ಬುದ್ಧಿಶಕ್ತಿಯ ಬಲದಿಂದ ಆ ಪರಮಾತ್ಮನನ್ನು ಅಪರೋಕ್ಷೀಕರಿಸಲು ಸಾಧ್ಯವಿಲ್ಲ, ಗುರುಮುಖದಿಂದ ಅನೇಕ ಬಾರಿ ಶ್ರವಣಾಭ್ಯಾಸ ಮಾಡಿಯೂ ಅವನನ್ನು ನೋಡಲು ಸಾಧ್ಯವಿಲ್ಲ, ಪರಮಾತ್ಮನು ತನ್ನ ಇಚ್ಛೆಯಿಂದಲೇ ಯೋಗ್ಯ ಜೀವನನ್ನು ಭಕ್ತನೆಂದು ಪರಿಗ್ರಹಿಸಿ ಅವನ ಮೇಲೆ ಪ್ರಸನ್ನನಾಗುತ್ತಾನೆ ಮತ್ತು ಅವನಿಗೆ ಪ್ರತ್ಯಕ್ಷನಾಗುತ್ತಾನೆ. ಪ್ರಸನ್ನನಾಗದೆ ಅವನು ತನ್ನ ಸ್ವರೂಪವನ್ನು ಯಾರಿಗೂ ಪ್ರಕಟಪಡಿಸುವುದಿಲ್ಲ, ಪರಮಾತ್ಮನು ಯಾವಾಗಲೂ ಎಲ್ಲಾ ರೀತಿಯಿಂದಲೂ ಅವ್ಯಕ್ತಸ್ವ-ರೂಪನು. ಅಂದರೆ ಅಪ್ರತ್ಯಕ್ಷನು. ಅನುಗ್ರಹವಿಲ್ಲದೆ ಅವನು ಯಾವ ರೀತಿಯಿಂದಲೂ ಯಾರಿಗೂ ಪ್ರತ್ಯಕ್ಷನಾಗುವುದಿಲ್ಲ.*
॥ 23 ॥

**ತದ್ವ್ಯಪ್ಟೇಃ ಪ್ರಸಾದೈಕಲಭ್ಯತ್ವೇ ಕಿಂ ವೈರಾಗ್ಯಾದಿಸಾಧನೈರಿತ್ಯತಃ ಜ್ಞಾನದ್ವಾರಾ ಪ್ರಸಾದಹೇತುತಯಾ ತದಪ್ಯಾವಶ್ಯಕಮಿತಿ ಭಾವೇನಾಹ- ನಾವಿರತ ಇತಿ ।**

**ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ ।**
**ನಾಶಾಂತಮನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್ ॥ 24 ॥**

**ದುಶ್ಚರಿತಾತ್ ದುರಾಚಾರಾತ್ ಅವಿರತಃ ಅನಿವೃತ್ತೋ ದುರಾಚಾರೀತಿ ಯಾವತ್, ಪ್ರಜ್ಞಾನೇನ ಪ್ರಜ್ಞಾನದ್ವಾರಾ ಏನಂ ಭಗವತಂ ತತ್ಪ್ರಸಾದಂ ನ ಆಪ್ನುಯಾದಿತ್ಯನ್ವಯಃ । ಏವಮಗ್ರೇಽಪಿ । ಅಶಾಂತಃ ಶ್ರವಣಮನನಧ್ಯಾನೈರ್ಭಗವನ್ನಿಷ್ಠಾರಹಿತಃ । ಅಸಮಾಹಿತಃ ಯಥಾ ವಸ್ತು ತಥಾ ಜ್ಞಾನಹೀನಃ । ಅಶಾಂತಮಾನಸಃ ವಿಷಯಭೋಗೇ ಅಲಂಬುದ್ಧಿಹೀನಃ ವಿಷಯಲಂಪಟ ಇತಿ ಯಾವತ್ ॥ 24 ॥**

ಪ್ರ :- ಹಾಗಾದರೆ ಪರಮಾತ್ಮನ ಅಪರೋಕ್ಷಜ್ಞಾನವು ಅವನ ಪ್ರಸಾದದಿಂದಲೇ ಆಗುತ್ತದೆ ಎಂದಾಯಿತು. ಅವನ ಪ್ರಸಾದವು ಅವನ ಅಧೀನವೇ ಹೊರತು ನಮ್ಮ ಅಧೀನವಲ್ಲ, ವೈರಾಗ್ಯ, ಭಕ್ತಿ, ಶ್ರವಣ ಮನನಾದಿ ಸಾಧನಗಳು ಮಾತ್ರವೇ ನಮ್ಮ ಅಧೀನವಾಗಿರುತ್ತವೆ. ಅವುಗಳಿಂದ ಪರಮಾತ್ಮನ ಅನುಗ್ರಹವಾಗುವುದಿಲ್ಲವೆಂದಾದ ಮೇಲೆ, ಅವುಗಳಿಂದ ಏನೂ ಪ್ರಯೋಜನವಿಲ್ಲ ಎಂದ ಹಾಗಾಯಿತಲ್ಲವೇ ?

ಉ:- ಹಾಗಲ್ಲ, ವೈರಾಗ್ಯಾದಿಸಾಧನಗಳಿಂದ ಜ್ಞಾನವು ಉಂಟಾಗುತ್ತದೆ. ಜ್ಞಾನದ ಮೂಲಕ ಪರಮಾತ್ಮನ ಪ್ರಸಾದ ಉಂಟಾಗುತ್ತದೆ.

ಪ್ರಿಯೋ ಹಿ ಜ್ಞಾನಿನೋತ್ಯರ್ಥಂ ? ನಾನು ಜ್ಞಾನಿಗೆ ಅತ್ಯಂತ ಪ್ರೀತಿವಿಷಯನಾಗಿದ್ದೇನೆ ಎಂದು ಭಗವದ್ಗೀತೆಯಲ್ಲಿಯೂ ಹೇಳಿದ್ದಾನೆ. ಈ ಅಂತಹ ಅಧಿಕಾರಿಯ ಸ್ವಾಧೀನವಾಗಿರುವ ಸಾಧನಗಳನ್ನೇ ಈ ಕೆಳಗಿನ ಮಂತ್ರವು ಹೇಳುತ್ತದೆ.

ಯಾವನು ಬ್ರಹ್ಮನಿಂದಾ - ಸುರಾಪಾನ - ದುರ್ಜನ ಸಹವಾಸ ಮುಂತಾದ ದುರಾಚಾರಗಳನ್ನು ಬಿಟ್ಟಿರುವುದಿಲ್ಲವೋ, ಅವನು ಎಷ್ಟು ಸಾಧನಗಳನ್ನು ಅನುಷ್ಠಾನ ಮಾಡಿದರೂ ಪರಮಾತ್ಮನ ಅಪರೋಕ್ಷ ಜ್ಞಾನ ಮತ್ತು ಪ್ರಸಾದಗಳು ಅವನಿಗೆ ಆಗಲಾರವು. ಹೀಗೆಯೇ ಶಮವೂ ಅತ್ಯಾವಶ್ಯಕ. ಶಮವೆಂದರೆ, ಶ್ರವಣ, ಮನನ, ಧ್ಯಾನಗಳ ಮೂಲಕ ಮನಸ್ಸನ್ನು ಪರಮಾತ್ಮನಲ್ಲಿಯೇ ಇಡುವುದು. ಶಮವಿಲ್ಲದವನಿಗೂ ಪರಮಾತ್ಮ ಜ್ಞಾನ ಮತ್ತು ಪ್ರಸಾದಗಳು ಆಗಲಾರವು. ಪ್ರಪಂಚದಲ್ಲಿರುವ ವಸ್ತುಗಳನ್ನು ಹೇಗೆ ಇವೆಯೋ ಹಾಗೆಯೇ ತಿಳಿಯಲು ಪ್ರಯತ್ನಿಸಬೇಕು. ಇದಕ್ಕೆ ಸಮಾಧಾನವೆಂದು ಹೆಸರು. ಈ ಸಮಾಧಾನ ಎಂಬ ಯಥಾರ್ಥಜ್ಞಾನವಿಲ್ಲದವನೂ ವಿಷಯಲಂಪಟನೂ ಪರಮಾತ್ಮನ ಅಪರೋಕ್ಷಜ್ಞಾನವನ್ನು ಪಡೆಯಲಾರನು. ಇಂಥಹವರಿಗೆ ಪರಮಾತ್ಮನ ಅನುಗ್ರಹವಾಗಲಾರದು ॥ 24 ॥

---

★ ಓಂ ಅತೋನಂತೇನ ತಥಾ ಹಿ ಲಿಂಗಂ ಓಂ (ಬ್ರ.ಸೂ. ತೃತೀಯಾಧ್ಯಾಯ ದ್ವಿತೀಯಪಾದ 27ನೆಯ ಸೂತ್ರ) ಈ ಸೂತ್ರವು ಮೇಲೆ ಹೇಳಿರುವ ವಿಷಯವನ್ನು ವಿಶದೀಕರಿಸುತ್ತದೆ. ಪರಬ್ರಹ್ಮವು ಅವ್ಯಕ್ತವೇ. ಆದರೂ ಅದು ಎಣೆಯಿಲ್ಲದ ಶಕ್ತಿಯಿಂದ ಕೂಡಿದೆಯಾದ್ದರಿಂದ, ತನ್ನ ಇಚ್ಛೆಯಿಂದಲೇ ಭಕ್ತರಿಗೆ ಪ್ರತ್ಯಕ್ಷವಾಗುತ್ತದೆ. ಪರಬ್ರಹ್ಮವು ಅಪ್ರತ್ಯಕ್ಷ ಆದರೂ ಪ್ರತ್ಯಕ್ಷವಾಗುತ್ತದೆ ಎಂಬ ವಿರುದ್ಧವಾದ ಎರಡು ವಿಷಯದಲ್ಲಿ ಶ್ರುತಿಯಿದೆ. ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ ಎಂಬ ಲಿಂಗವೂ ಇದೆ ಎಂದು ಸೂತ್ರಾರ್ಥ.

**ಪುನಸ್ತನ್ಮಹಿಮೋಕ್ತಿಪೂರ್ವಕಂ ತಜ್ಜ್ಞಾನಂ ದುರ್ಲಭಂ ಇತ್ಯಾಹ- ಯಸ್ಯೇತಿ ।**

**ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ ।**
**ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥ 25 ॥**

**ಯಸ್ಯ ಭಗವತಃ ಬ್ರಹ್ಮ ಬ್ರಾಹ್ಮಣತ್ವಜಾತ್ಯಾಕ್ರಾಂತಂ ವಸ್ತು, ಕ್ಷತ್ರಂ ಕ್ಷತ್ರಿಯತ್ವಜಾತ್ಯಾಕ್ರಾಂತಂ ಚ ಇತರೇತರಸಮುಚ್ಚಯೇ ಚಶಬ್ದೌ, ಉಭೇ ಬ್ರಹ್ಮಕ್ಷತ್ರೇ ಓದನಃ ಅನ್ನಂ ಭವತಃ, ಯಸ್ಯ ಬ್ರಹ್ಮಕ್ಷತ್ರಾಖ್ಯೋದನವತಃ ಮೃತ್ಯುಃ ಪ್ರಾಣಿನಾಂ ಮಾರಕಃ ಉಪಸೇಚನಂ, ಅದ್ಯಮಾನತ್ವೇ ಸತ್ಯನ್ನಾದಿದಾನ ಸಾಧನಂ, ವ್ಯಂಜನರೂಪಮಿತ್ಯರ್ಥಃ, ಸ ಏವಂ ಜಗತ್ ಸಂಹರ್ತೃತ್ವಗುಣಕೋ ಮಹಾಬಲಃ ಯತ್ರ ತಿಷ್ಠತಿ ಇತ್ಥಾ ಇತ್ಥಂ ಏವಂ ಪ್ರಕಾರೇಣ, ತದಿತಿ ಶೇಷಃ, ತಸ್ಯಾವಸ್ಥಾನಂ ಕೋ ವೇದ ನ ಕೋಽಪೀತಿ ।**

***॥ ಇತಿ ಕಾಠಕೇ ಪ್ರಥಮಾಧ್ಯಾಯೇ ದ್ವಿತೀಯಾ ವಲ್ಲೀ ॥***

ಯಮರಾಜನು ಮತ್ತೂ ಭಗವಂತನ ಮಹಿಮೆಯನ್ನು ಹೇಳುತ್ತಾ ಆ ಭಗವಂತನ ಯಥಾರ್ಥ ಜ್ಞಾನವೂ ಅವನ ಅಪರೋಕ್ಷಜ್ಞಾನವೂ ದುರ್ಲಭವೆಂದು ಹೇಳುತ್ತಿದ್ದಾನೆ.

ಪರಬ್ರಹ್ಮನು ಪ್ರಳಯಕಾಲದಲ್ಲಿ ಎಲ್ಲವನ್ನೂ ಭಕ್ಷಿಸುತ್ತಾನೆ. ಅಂದರೆ ಸಂಹರಿಸುತ್ತಾನೆ. ಅವನಿಗೆ ತನ್ನ ಮುಖದಿಂದ ಹುಟ್ಟಿದ ಬ್ರಾಹ್ಮಣ ಜಾತಿಯ ಎಲ್ಲಾ ವಸ್ತುಗಳೂ, ಬಾಹುಗಳಿಂದ ಹುಟ್ಟಿದ ಕ್ಷತ್ರಿಯ ಜಾತಿಯ ಎಲ್ಲಾ ವಸ್ತುಗಳೂ ಅನ್ನವಾಗಿರುತ್ತವೆ. ಸರ್ವಸಂಹಾರಕವಾಗಿರುವ ಈ ಪರಬ್ರಹ್ಮನಿಗೆ, ಎಲ್ಲರಿಗೂ ಭಯಂಕರವಾದ ಮೃತ್ಯುವು ವ್ಯಂಜನವಾಗುತ್ತದೆ. ಅಂದರೆ ಅನ್ನವನ್ನು ಊಟ ಮಾಡಲು ಬೇಕಾದ ಹುಳಿ, ತೊವ್ವೆ ಮುಂತಾದ ಪದಾರ್ಥಗಳಂತೆ ಇರುತ್ತದೆ. ಬ್ರಾಹ್ಮಣ ಜಾತ್ಯಭಿಮಾನಿಯಾದ ಚತುರ್ಮುಖ ಬ್ರಹ್ಮನನ್ನೂ, ಕ್ಷತ್ರಿಯಜಾತ್ಯಭಿಮಾನಿಯಾದ ಮುಖ್ಯಪ್ರಾಣನನ್ನೂ ಅನ್ನಮಾಡಿಕೊಂಡು ಸಂಹರಿಸುವ ಆ ಪರಬ್ರಹ್ಮನಿಗೆ ಮೃತ್ಯುವು ಹುಳಿ ಪಲ್ಯಗಳಿಗೆ ಸಮಾನವಾದ ವ್ಯಂಜನವು. ಹೀಗೆ ಮಹಾಮಹಿಮೆಯಿಂದ ಕೂಡಿದ ಪರಬ್ರಹ್ಮವು ಇಂತಹ ಕಡೆ ಹೀಗೆಯೇ ಇದೆಯೆಂದು ತಿಳಿಯಲು ಅಥವಾ ಹೇಳಲು ಯಾರಿಗೂ ಸಾಧ್ಯವಿಲ್ಲ. ಸಮಸ್ತ ಜಗತ್ತನ್ನು ಸಂಹರಿಸುವ ಮಹಾ ಬಲಶಾಲಿಯಾದ ಅವನನ್ನು ಸಂಪೂರ್ಣವಾಗಿ ತಿಳಿಯುವವರು ಯಾರು ? ಯಾರೂ ಇಲ್ಲ.

*ಇಲ್ಲಿಗೆ ಕಾಠಕೋಪನಿಷತ್ತಿನಲ್ಲಿ ಪ್ರಥಮಾಧ್ಯಾಯದ ದ್ವಿತೀಯ ವಲ್ಲಿಯು ಸಮಾಪ್ತವಾಯಿತು.*

★ ★ ★

# ಪ್ರಥಮಾಧ್ಯಾಯ ತೃತೀಯವಲ್ಲೀ

**ಅಧ್ಯಾತ್ಮಯೋಗಾಗಮೇನೇತಿ ಭಗವತೋ ಧ್ಯಾನಮುಕ್ತಮ್ । ಸ ಕುತ್ರ ಧ್ಯೇಯಃ ಇತ್ಯತಃ ಅಧಿಷ್ಠಾನಮಾಹ- ಋತಮಿತಿ ।**

**ಋತಂ ಪಿಬಂತೌ ಸುಕೃತಸ್ಯ ಲೋಕೇ**
**ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ ।**
**ಛಾಯಾತಪೌ ಬ್ರಹ್ಮವಿದೋ ವದಂತಿ**
**ಪಂಚಾಗ್ನಯೋ ಯೇ ಚ ತ್ರಿನಾಚಿಕೇತಾಃ ॥ 1 ॥**

**ಯೌ ಸುಕೃತಸ್ಯ ಲೋಕೇ ಪುಣ್ಯಸಂಬಂಧಿನಿ ಲೋಕೇ ಪುಣ್ಯನಿರ್ಮಿತಶರೀರೇ ಹೃದಯ-ಗುಹಾಯಾಂ ಪ್ರವಿಷ್ಟೌ ತತ್ರಾಪಿ ಪರಮೇ ಸರ್ವಜೀವೋತ್ತಮೇ ಪರಾರ್ಧೇ ಪರಂ ಅತ್ಯಂತಂ, ಪರೇಭ್ಯ ಇತಿ ವಾ, ಆಸಮಂತಾತ್ ಋದ್ಧೇ ಅಭಿವೃದ್ಧೆ ಜ್ಞಾನಾದಿಪೂರ್ಣೇ ಮುಖ್ಯವಾಯೌ ಪ್ರವಿಷ್ಟೌ ಋತಂ ಸುಕೃತಫಲಂ ಪಿಬಂತೌ ಭುಂಜಾನೌ ಅತ್ಮಾಂತರಾತ್ಮಾಖ್ಯವಿಷ್ಣುರೂಪವಿಶೇಷೌ ಬ್ರಹ್ಮವಿದಃ ಬ್ರಹ್ಮಜ್ಞಾನಿನಃ ಪಂಚಾಗ್ನಯಃ, ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯಯಜ್ಞ, ಬ್ರಹ್ಮಯಜ್ಞ ರೂಪ ಪಂಚ-ಮಹಾಯಜ್ಞವಂತಃ ದ್ಯು, ಪರ್ಜನ್ಯ, ಪೃಥಿವೀ, ಪುಂ, ಸ್ತ್ರೀ ರೂಪ ಪಂಚಾಗ್ನಿವಿದ್ಯಾನಿಷ್ಠಾ ವಾ ತ್ರಿನಾಚಿ-ಕೇತಾಃ ತ್ರಿವಾರಕೃತನಾಚಿಕೇತಾಗ್ನಯಃ ಯೇ ತೇ ಛಾಯಾತಪೌ ಸಾಧ್ವಸಾಧ್ವೋಃ ಛಾಯಾತಪಾವಿವ ಸುಖದುಃಖದೌ ವದಂತೀತಿ । ತಥಾ ಚ ಸೂತ್ರಂ 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' (ಬ್ರ.ಸೂ. 1-2-13) ಇತಿ । ಹೃದಯಗುಹಾಸ್ಥವಾಯೌ ಧ್ಯೇಯಃ ಇತಿ ಭಾವಃ ॥ 1 ॥**

ಪ್ರಶ್ನೆ : ಪರಮಾತ್ಮನನ್ನು ಧ್ಯಾನಿಸಿದರೆ ಅವನು ಗೋಚರವಾಗುವನು ಎಂದು ಹಿಂದೆ ಹೇಳಿದ್ದೀರಿ. ಆದರೆ ಆ ಪರಮಚೇತನನನ್ನು ಎಲ್ಲಿ, ಯಾವ ಸ್ಥಳದಲ್ಲಿ ಅಂದರೆ ಯಾವ ಅಧಿಷ್ಠಾನದಲ್ಲಿ (ಪ್ರತಿಮೆಯಲ್ಲಿ) ಧ್ಯಾನಿಸಬೇಕೆಂದು ತಿಳಿಸಬೇಕು.

ಉತ್ತರ :- ಈ ಪ್ರಶ್ನೆಯು ಬಹಳ ಉತ್ತಮವಾಗಿದೆ. ಅದಕ್ಕೆ ಉತ್ತರ ರೂಪವಾಗಿ ಪರಮಾತ್ಮನ ಧ್ಯಾನಕ್ಕೆ ಮುಖ್ಯ ಪ್ರತಿಮೆಯನ್ನೂ ಅವನ ರೂಪ ವಿಶೇಷಗಳನ್ನೂ ತಿಳಿಸುತ್ತೇನೆ ಕೇಳು –

ಈ ಮಾನವ ಶರೀರವು ಪುಣ್ಯದಿಂದಲೇ ಸಿಗುತ್ತದೆ (ದುರ್ಲಭಂ ಮಾನುಷಂ ಜನ್ಮ ಎಂಬ ಮಾತು ಸರ್ವವಿದಿತವಾಗಿದೆ.) ಅಂತಹ ಪುಣ್ಯಲಬ್ಧವಾದ ಈ ಶರೀರದಲ್ಲಿ ಹೃದಯದಲ್ಲಿ ಒಂದು ರಹಸ್ಯ ಸ್ಥಾನವಿದೆ. ಅದನ್ನು ಹೃದಯ ಗುಹೆ ಎನ್ನುತ್ತಾರೆ. ಅಲ್ಲಿ ಸರ್ವಜೀವೋತ್ತಮರಾದ ವಾಯುದೇವರು ನೆಲೆಸಿರುತ್ತಾರೆ. ಆ ವಾಯುದೇವರು ಇತರ ದೇವತೆಗಳಿಗಿಂತಲೂ ಹೆಚ್ಚು ಜ್ಞಾನಾದಿಗುಣಗಳಿಂದ ಕೂಡಿರುತ್ತಾರೆ. ಇಂತಹ ಮುಖ್ಯಪ್ರಾಣದೇವರೆಂಬ ಉತ್ತಮ ಪ್ರತಿಮೆಯಲ್ಲಿ ಆತ್ಮಾ ಅಂತರಾತ್ಮ ಎಂಬ ಎರಡು ರೂಪಗಳಿಂದ ಶ್ರೀಮನ್ನಾರಾಯಣನು ಪ್ರವೇಶಿಸಿದ್ದಾನೆ. ಅವನು ಸಮಸ್ತ ಜೀವರು ಮಾಡುತ್ತಿರುವ ಪುಣ್ಯಗಳು ಅಪ್ರಾಕೃತವಾದ ಸ್ವಸ್ವರೂಪವಾಗಿರುವ ಸಾರಾನಂದವನ್ನು ಅನುಭವಿಸುತ್ತಾ ಇರುತ್ತಾನೆ. ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯ ಯಜ್ಞ, ಬ್ರಹ್ಮಯಜ್ಞ ಎಂಬ ಐದು ಯಜ್ಞಗಳನ್ನು ಮಾಡುವ ಬ್ರಹ್ಮಜ್ಞಾನಿಗಳೂ ಪರಮಾತ್ಮನ ಎರಡು ರೂಪಗಳೂ ಸಜ್ಜನರಿಗೆ ನೆರಳಿನಂತೆ ಸುಖವನ್ನು ಕೊಡುತ್ತವೆಯೆಂದೂ, ದುರ್ಜನರಿಗೆ ಬಿಸಿಲಿನಂತೆ ದುಃಖವನ್ನು ಕೊಡುತ್ತವೆ ಯೆಂದೂ ತಿಳಿಯುತ್ತಾರೆ. ಈ ಬ್ರಹ್ಮಜ್ಞಾನಿಗಳೂ ದ್ಯು ಪರ್ಜನ್ಯ ಪೃಥಿವೀ ಪುರುಷ ಸ್ತ್ರೀ

ಎಂಬ ಪಂಚಾಗ್ನಿ ವಿದ್ಯೆಯಲ್ಲಿ ನಿಷ್ಣಾತರಾಗಿರುತ್ತಾರೆ. ಅವರು ಮೂರು ಬಾರಿ ನಾಚಿಕೇತಾಗ್ನಿ ಚಯನವನ್ನು ಮಾಡಿರುತ್ತಾರೆ. ಇಂತಹವರು ಮಾತ್ರವೇ ಪರಮಾತ್ಮನ ರೂಪಗಳನ್ನು ಅವುಗಳ ಮಹಿಮೆಯನ್ನು ಸರಿಯಾಗಿ ತಿಳಿಯಬಲ್ಲರು.★

**ಧ್ಯಾನಸ್ಯಾಭ್ಯರ್ಹಿತಂ ಪ್ರತ್ಯಾಹಾರರೂಪಂ ಸಾಧನಂ ವಿಜ್ಞಾನಸಾರಥಿರಿತ್ಯಾದಿನಾ ವಿವಕ್ಷುಃ ಭಗವಂತಂ ಸ್ತುವನ್ ಪ್ರತಿಜಾನೀತೇ- ಯಃ ಸೇತುರಿತಿ ।**

**ಯಃ ಸೇತುರೀಜಾನಾನಾಮ್ ಅಕ್ಷರಂ ಬ್ರಹ್ಮ ತತ್ಪರಮ್ ।**
**ಅಭಯಃ ತಿತೀರ್ಷತಾಂ ಪಾರಂ ನಾಚಿಕೇತಂ ಶಕೇಮಸಿ ॥ 2 ॥**

**ಈಜಾನಾನಾಂ, ಯಜತೇಃ ಶಾನಚ್ ಸಂಪ್ರಸಾರಣಂ, ವಿಷ್ಣುಯಾಜಿನಾಂ ಯಃ ಸೇತುಃ ಮರ್ಯಾದಾ ಯದಕ್ಷರಂ ಬ್ರಹ್ಮ ಪರಂ ಉತ್ತಮಂ ತಿತೀರ್ಷತಾಂ ಸಂಸಾರಾರ್ಣವಂ ತರ್ತುಮಿಚ್ಛತಾಂ ಅಭಯಂ ಪಾರಂ ಅಭಯಪ್ರದಂ ತೀರಂ, ಧ್ಯಾತುಂ ನಾಚಿಕೇತಂ ನಚಿಕೇತಸಂ ಪ್ರತಿ ಸಾಧನಂ ವಕ್ತುಂ ಶಕೇಮಸಿ ಶಕ್ನುಮ ಇತಿ ಯೋಜ್ಯಮ್ । ಶಕ್ಲೃಶಕ್ತೌ ಶಬ್‌ವಿಕರಣಂ ಛಾಂದಸಮ್ । ಇದಂತೋ ಮಸೀತಿ ಮಸಿಃ ॥ 2 ॥**

ಧ್ಯಾನವನ್ನು ಎಲ್ಲಿ ಮಾಡಬೇಕೆಂದು ಹೇಳಿದ್ದಾಯಿತು. ಈಗ ಧ್ಯಾನಕ್ಕೆ ಅತ್ಯಾವಶ್ಯಕವಾದ ಸಾಧನವು ಯಾವುದು ಎಂಬ ಪ್ರಶ್ನೆಯು ಉಂಟಾಗುತ್ತದೆ. ಆ ಪ್ರಶ್ನೆಗೆ ಉತ್ತರವನ್ನು ವಿಜ್ಞಾನಸಾರಥಿರ್ಯಸ್ತು (ಅ. 1 ವಲ್ಲೀ 3 ಮಂತ್ರ 9 ) ಎಂಬ ಮಂತ್ರ-ದಲ್ಲಿ ಮುಂದೆ ಹೇಳುತ್ತಾರೆ. ಅದಕ್ಕಿಂತಲೂ ಮೊದಲು ಯಾವ ಸಾಧನಗಳಿಂದ ಪರಮಾತ್ಮನನ್ನು ಹೊಂದಬೇಕಾಗಿದೆಯೋ ಅಂತಹ ಪರಮಾತ್ಮನ ಗುಣಗಳನ್ನು ಅವಶ್ಯವಾಗಿ ತಿಳಿದು ಹೊಗಳಬೇಕಲ್ಲವೇ ? ಈ ಮಂತ್ರದಲ್ಲಿ ಯಮಧರ್ಮರಾಜನು ಪರಮಾತ್ಮನ ಗುಣಗಳನ್ನು ಹೊಗಳುತ್ತಾ ತಾನು ಮುಂದೆ ಹೇಳಲಿರುವ ವಿಷಯದ ಪ್ರತಿಜ್ಞೆಯನ್ನೂ ಮಾಡುತ್ತಾನೆ.

ಲೋಕದಲ್ಲಿ ಜನರು ಬೇರೆ ಬೇರೆ ದೇವತೆಗಳನ್ನು ಪೂಜಿಸುತ್ತಾರೆ. ಆದರೆ ಇತರ ದೇವತೆಗಳ ಪೂಜಾದಿಗಳಿಂದ ಪರಮಪುರುಷಾರ್ಥ ಪ್ರಾಪ್ತಿಯಾಗುವುದಿಲ್ಲ, ಯಾರು ಸರ್ವೋತ್ತಮನಾದ ಶ್ರೀಮನ್ನಾರಾಯಣನನ್ನು ಪೂಜಿಸುತ್ತಾರೋ ಅವರು ಸಂಸಾರ ಸಮುದ್ರವನ್ನು ದಾಟಿಸುವ ಸೇತುವಿನಂತಿರುವ, ಜ್ಞಾನಿಗಳಿಗೆ ಕೊನೆಯಲ್ಲಿ ಎಲ್ಲೆಯಾಗಿರುವ ನಾರಾಯಣನನ್ನು ಪಡೆಯುತ್ತಾರೆ. ಆ ಪರಮಾತ್ಮನು ನಾಶರಹಿತನು, ಸರ್ವೋತ್ತಮನು, ಸಂಸಾರಸಮುದ್ರವನ್ನು ದಾಟಲು ಬಯಸುವವರಿಗೆ ಅಭಯಪ್ರದವಾದ ತೀರದಂತಿರುತ್ತಾನೆ. ಇಂತಹ ಪರಮಾತ್ಮನನ್ನು ಧ್ಯಾನ ಮಾಡಲು ಬೇಕಾಗಿರುವ ಸಾಧನಗಳನ್ನು ಎಲೈ ನಚಿಕೇತನೇ ! ನಿನಗೆ ಉಪದೇಶಿಸಲು ನಾವು ಶಕ್ತರಾಗಿದ್ದೇವೆ.

**ಉಪೋದ್ಘಾತಂ ಶ್ಲೋಕದ್ವಯೇನಾಹ - ಆತ್ಮಾನಮಿತಿ ।**

**ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ ।**
**ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥ 3 ॥**

---

★ ಶ್ರೀ ಬಾದರಾಯಣರು ಓಂ ಗುಹಾಂ ಪ್ರವಿಷ್ಟಾವಾತ್ಮನೌ ಹಿ ತದ್ದರ್ಶನಾತ್ ಓಂ ಬ್ರ.ಸೂ.ಪ್ರ.ಅ.ದ್ವಿ.ಪಾ 3ನೇ ಅ. ಸ. ಪ್ರ. 11 ಎಂಬ ಸೂತ್ರದಲ್ಲಿ ಹೃದಯ ಗುಹೆಯಲ್ಲಿ ಪ್ರವೇಶಿಸಿರುವವುಗಳು ಪರಮಾತ್ಮನ ಎರಡು ರೂಪಗಳಿಂದ ಸಿದ್ಧಾಂತಿಸಿರುತ್ತಾರೆ. ಆದುದರಿಂದ ಜೀವನ ಹೃದಯ ಗುಹೆಯಲ್ಲಿರುವ ವಾಯುದೇವರಲ್ಲಿ ಪರಮಾತ್ಮನನ್ನು ಧ್ಯಾನ ಮಾಡಬೇಕು.

**ಆತ್ಮಾನಂ ಶರೀರಾಂತರ್ವ್ಯಾಪಿನಂ ಜೀವಮೇವ ರಥಿನಂ ವಿದ್ಧಿ । ಶರೀರಂ ಚ ರಥಂ ವಿದ್ಧಿ ಜಾನೀಹಿ । ಪ್ರಗ್ರಹಂ ರಜ್ಜುಂ ಮನಸ್ತ್ವಿತ್ಯನ್ವಯಃ ॥ 3 ॥**

ಶರೀರದೊಳಗೆ ಪ್ರಕಾಶರೂಪದಿಂದ ಸರ್ವತ್ರ ವ್ಯಾಪಿಸಿರುವ ಜೀವನನ್ನು ರಥಿಕನೆಂದು ತಿಳಿಯಬೇಕು. ಈ ಶರೀರವನ್ನು ರಥವೆಂದು ತಿಳಿಯಬೇಕು. ಬುದ್ಧಿತತ್ವವನ್ನು ಸಾರಥಿಯೆಂದು ತಿಳಿಯಬೇಕು. ಮನಸ್ಸನ್ನು ಕುದುರೆಯ ಕಡಿವಾಣದ ಹಗ್ಗವೆಂದು ತಿಳಿಯಬೇಕು.

**ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ ।**
**ಆತ್ಮೇಂದ್ರಿಯಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥ 4 ॥**

**ಇಂದ್ರಿಯಾಣಿ ಶ್ರೋತ್ರಾದೀನಿ ಹಯಾನಶ್ವಾನಾಹುಃ ಪ್ರಾಜ್ಞಾಃ । ತೇಷು, ತೇಷಾಂ ವ್ಯತ್ಯಯಾತ್, ಹಯರೂಪೇಂದ್ರಿಯಾಣಾಂ ಗೋಚರಾನ್ ವಿಷಯಭೂತಾನ್ ಶಬ್ದಾದೀನ್ ವಿಷಯಾನ್ ಅಶ್ವ-ಸಂಚಾರಾನುಕೂಲದೇಶಾನಾಹುಃ ಇತ್ಯರ್ಥಃ । ಆತ್ಮಾ ಆತ್ಮಾನಂ ಇಂದ್ರಿಯಮನೋಭಿರ್ಯುಕ್ತಂ ಭೋಕ್ತೇತಿ ಸುಖದುಃಖಾನುಭವಕೃತೋಚ್ಚತ್ವನೀಚತ್ವಭಾಜಮಾಹುಃ ಮನೀಷಿಣೋ ಜ್ಞಾನಿನ ಇತ್ಯರ್ಥಃ ॥ 4 ॥**

ಕಣ್ಣು, ಕಿವಿ, ಮುಂತಾದ ಇಂದ್ರಿಯಗಳನ್ನು ಈ ಶರೀರವೆಂಬ ರಥಕ್ಕೆ ಕುದುರೆಗಳೆಂದು ಜ್ಞಾನಿಗಳು ಹೇಳುತ್ತಾರೆ. ಕುದುರೆಗಳಂತಿರುವ ಇಂದ್ರಿಯಗಳಿಗೆ ಗ್ರಹಿಸಲು ಯೋಗ್ಯವಾದ ರೂಪಶಬ್ದ ಮುಂತಾದ ವಿಷಯಗಳನ್ನು ಕುದುರೆಗಳ ಸಂಚಾರಕ್ಕೆ ಯೋಗ್ಯವಾದ ಮೈದಾನಪ್ರದೇಶದಂತೆ ಎಂದು ತಿಳಿಯಬೇಕು. ಹೀಗೆ ಇಂದ್ರಿಯ ಮತ್ತು ಮನಸ್ಸುಗಳಿಂದ ಕೂಡಿದ ಆತ್ಮನನ್ನು ಜ್ಞಾನಿಗಳು ಭೋಕ್ತಾ ಎಂದು ಹೇಳುತ್ತಾರೆ. ಭೋಕ್ತಾ ಎಂದರೆ ಅನುಭವಿಸುವವನು ಎಂದು ಅರ್ಥವು. ಸುಖಾನುಭವದಿಂದ ನಾನು ಉಚ್ಚ ಎಂದರೆ ಶ್ರೇಷ್ಠನಾಗಿದ್ದೇನೆ ಎಂಬ ಭಾವವು ಬರುತ್ತದೆ. ಇದೇ ಭೋಗವು ಇಂತಹ ಭೋಗವು ಆತ್ಮನಿಗೆ ಶರೀರದಲ್ಲಿ ಉಂಟಾಗುತ್ತದೆ. ಭೋಗದಿಂದ ಆ ಮನುಷ್ಯನು ಸ್ವರೂಪವಿಕಾರ ಹೊಂದುವುದಿಲ್ಲವೆಂದು ತಿಳಿಯಬೇಕು.

**ಅಶ್ವಭೂತೇಂದ್ರಿಯಾಣಾಂ ಪ್ರತ್ಯಾಹಾರಃ ಕಸ್ಯ ಭವತಿ, ಕಸ್ಯ ನೇತ್ಯತೋ ರಥಿತ್ವಾದ್ಯುಕ್ತೇರುಪ-ಯೋಗೋಕ್ತಿಪೂರ್ವಮಾಹ- ಯಸ್ತ್ವಿತಿ ॥**

**ಯಸ್ತ್ವವಿಜ್ಞಾನವಾನ್ ಭವತ್ಯಯುಕ್ತೇನ ಮನಸಾ ಸದಾ ।**
**ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ ॥ 5 ॥**

**ಯಸ್ಸದಾಽಯುಕ್ತೇನ ಅನಿಗೃಹೀತೇನ ಮನಸಾ ಅವಿಜ್ಞಾನವಾನ್ ವಿವೇಕಹೀನೋ ಭವತಿ ತಸ್ಯೇತ್ಯಾದಿ ವ್ಯಕ್ತಮ್ ॥ 5 ॥**

ಪ್ರ:= ಇಂದ್ರಿಯಗಳು ಕುದುರೆಗಳಂತೆ ಎಂದು ಹೇಳಿದಿರಿ. ಇಂತಹ ಇಂದ್ರಿಯಗಳನ್ನು ವಿಷಯಗಳ ಕಡೆಗೆ ಹೋಗದಂತೆ ತಡೆಯುವುದೇ ಪ್ರತ್ಯಾಹಾರವೆಂದು ನಾನು ತಿಳಿದಿದ್ದೇನೆ. ಇದು ಯಾರಿಗೆ ಸಿದ್ಧಿಸುತ್ತದೆ ? ಯಾರಿಗೆ ಸಿದ್ಧಿಸುವುದಿಲ್ಲ ?

ಉ :- ಹಿಂದೆ ಜೀವಾತ್ಮನು ರಥಿಕ, ಇಂದ್ರಿಯಗಳು ಕುದುರೆಗಳು ಎಂದು ಮುಂತಾಗಿ ಹೇಳಿದೆಯಲ್ಲವೇ ? ರಥಿಕನು ಕಡಿವಾಣವನ್ನು ಸರಿಯಾಗಿ ಹಿಡಿಯದಿದ್ದರೆ ಕೆಟ್ಟ ಕುದುರೆಗಳು ಅವನ ಅಧೀನಕ್ಕೆ ಬಾರದೆ ತಮಗೆ ಇಷ್ಟ ಬಂದ ಕಡೆಗೆ ಹೋಗಿ ಸಾರಥಿಗೆ ತೊಂದರೆಯನ್ನುಂಟು ಮಾಡುತ್ತವೆ. ಅದರಂತೆಯೇ ಮನಸ್ಸು ನಿಗ್ರಹಿಸದೆ ಅವಿವೇಕಿಯಾಗಿರುವ ಜೀವನಿಗೆ ಇಂದ್ರಿಯಗಳು ವಶವಾಗುವುದಿಲ್ಲ, ಅವನು ಇಂದ್ರಿಯಗಳು ಸೆಳೆದ ಕಡೆಗೆ ಹೋಗುತ್ತಾನೆ. ಅದರಿಂದಾಗಿ ಅನರ್ಥವನ್ನು ಅನುಭವಿಸುತ್ತಾನೆ. ಜೀವನನ್ನು ರಥಿಕನೆಂದೂ, ಇಂದ್ರಿಯಗಳನ್ನು ಕುದುರೆಗಳೆಂದೂ, ಮನಸ್ಸನ್ನು ಕಡಿವಾಣದ ಹಗ್ಗ (ಲಗಾಮು) ಎಂದೂ, ಹಿಂದೆ ನಿರೂಪಿಸಿದ್ದು ಈ ಸಾಮ್ಯವನ್ನು ತಿಳಿಸುವುದಕ್ಕೋಸ್ಕರವೇ ಆಗಿದೆ.

**ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸದಾ ।**
**ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ॥ 6 ॥**

**ಯುಕ್ತೇನ ನಿಗೃಹೀತೇನ । ವಿಜ್ಞಾನವಾನ್ ಸಾರಥಿಸ್ಥಾನೀಯಬುದ್ಧಿಮಾನ್ । ಸಾರಾಸಾರ-ವಿವೇಕವಾನ್ ತಸ್ಯೇತ್ಯಾದಿವ್ಯಕ್ತಮ್ ॥ 6 ॥**

ಎಲೈ ನಚಿಕೇತನೇ ! ಒಳ್ಳೆಯ ಕುದುರೆಗಳು ಸಾರಥಿಗೆ ಅಧೀನವಾಗಿರುವುದಿಲ್ಲವೇ ? ಅದರಂತೆ ಯಾವನು ಯಾವಾಗಲೂ ಮನಸ್ಸನ್ನು ನಿಗ್ರಹಿಸಿಕೊಂಡು, ಸಾರಥಿಯಂತೆ ಇರುವ ಸಾರಾಸಾರ ವಿವೇಕವೆಂಬ ವಿಜ್ಞಾನದಿಂದ ಕೂಡಿರುತ್ತಾನೋ ಅವನಿಗೆ ಇಂದ್ರಿಯಗಳು ಅಧೀನವಾಗಿರುತ್ತವೆ. ಅವನಿಗೆ ಧ್ಯಾನವು ಬಹಳ ಬೇಗನೆ ಸಿದ್ಧಿಸುತ್ತದೆ.

**ವಶೀಕೃತೇಂದ್ರಿಯತ್ವರೂಪಪ್ರತ್ಯಾಹಾರಾಭಾವಾಭಾವಯೋಃ ಕೋ ವಿಶೇಷಃ ಯೇನ ಸ ಅವಶ್ಯಕ ಇತ್ಯತಃ ತದಭಾವೇ ತದ್ಭಾವೇ ಚ ವಿಶೇಷಮಾಹ - ಯಸ್ತ್ವಿತ್ಯಾದಿನಾ ಮಂತ್ರದ್ವಯೇನ ।**

**ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಃ ಸದಾಽಶುಚಿಃ ।**
**ನ ಸ ತತ್ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ ॥ 7 ॥**

**ಅವಿಜ್ಞಾನವಾನ್ ವಿವೇಕಾಖ್ಯಬುದ್ಧಿರೂಪಸಾರಥಿಹೀನೋ ಭವತಿ । ಅಮನಸ್ಕಃ ಅವಶೀಕೃತ-ಮನಸ್ಕಃ । ಅಶುಚಿರಿತಿ । ವಿಷಯಲಂಪಟತ್ವಾದಿತಿ ಭಾವಃ । ಇಷ್ಟಾಪ್ರಾಪ್ತ್ಯಪ್ರಾಪ್ತೀ ಚ ಅಹ- ನ ಸ ಇತಿ । ತತ್ಪದಂ 'ಸರ್ವೇ ವೇದಾಃ' ಇತ್ಯುಕ್ತಂ ಬ್ರಹ್ಮಸ್ವರೂಪಮ್ ॥ 7 ॥**

ಪ್ರಶ್ನೆ :- ಇಂದ್ರಿಯಗಳನ್ನು ವಶಪಡಿಸಿಕೊಳ್ಳುವುದೇ ಪ್ರತ್ಯಾಹಾರವೆಂದು ಹೇಳಿದಂತಾಯಿತು. ಈ ಪ್ರತ್ಯಾಹಾರವು ಇಲ್ಲದಿದ್ದರೆ ನಮಗೆ ತೊಂದರೆಯೇನು ? ಇದ್ದರೆ ಅದರಿಂದ ಏನು ಉಪಕಾರ ? ಒಂದು ವಸ್ತುವು ಇಲ್ಲದಿದ್ದರೆ ತೊಂದರೆ, ಇದ್ದರೆ ಉಪಕಾರ, ಇವೆರಡೂ ಇದ್ದರೆ ಮಾತ್ರವೇ ಆ ವಸ್ತುವು ಅವಶ್ಯಕ ಎಂದು ಹೇಳುತ್ತಾರಲ್ಲವೇ ?

ಉತ್ತರ : ಹೌದು ಪ್ರತ್ಯಾಹಾರವು ಇಲ್ಲದಿದ್ದರೆ ಬಹಳ ತೊಂದರೆಯಿದೆ. ಅದನ್ನು ಸಂಪಾದಿಸಿದರೆ ಬಹಳ ಅನುಕೂಲತೆಯುಂಟಾಗುತ್ತದೆ. ಅದು ಹೇಗೆಂದರೆ ಹೇಳುತ್ತೇನೆ, ಕೇಳು.

ಬುದ್ಧಿಯು ಸಾರಥಿಯಂತೆ ಎಂದು ಹಿಂದೆ ಹೇಳಿದೆ. ಬುದ್ಧಿಯೆಂದರೆ ಸಾರಾಸಾರ ವಿವೇಕವು. ಈ ಬುದ್ಧಿಯೆಂಬ ಸಾರಥಿಯು ಅವಶ್ಯಕವಾಗಿ ಬೇಕು. ಇದು ಇಲ್ಲದಿದ್ದರೆ ಸಾರಥಿಯು ಇಲ್ಲದಂತೆ ಆಗುತ್ತದೆ. ಈ ಮನಸ್ಸನ್ನು ವಶಪಡಿಸಿಕೊಂಡಿರಬೇಕು. ಮನೋನಿಗ್ರಹವಿಲ್ಲದಿದ್ದರೆ ಕುದುರೆಗಳ ಲಗಾಮು ಇಲ್ಲದಂತಾಗುತ್ತದೆ. ಇವೆರಡು ಇಲ್ಲದ ಜೀವನು ಕುದುರೆಗಳು ತಮಗೆ ಇಷ್ಟಬಂದ ಸ್ಥಳಕ್ಕೆ ಓಡುವಂತೆ ವಿಷಯಗಳ ಕಡೆಗೆ ಧಾವಿಸುತ್ತಾ ಅವುಗಳಲ್ಲೇ ಆಸಕ್ತನಾಗಿ ಧ್ಯಾನಕ್ಕೆ ಯೋಗ್ಯವಾದ ಪವಿತ್ರತೆಯನ್ನು ಕಳೆದುಕೊಳ್ಳುತ್ತಾನೆ. ಇಂತಹ ಜೀವನಿಗೆ (ಕಾ.ಪ್ರ. ಅ. ವಲ್ಲಿ 2 ಮಂ 15) ಸರ್ವೇ ವೇದಾ ಯತ್ಪದಮಾಮನಂತಿ (ಎಲ್ಲಾ ವೇದಗಳೂ ಯಾವ ಪರಬ್ರಹ್ಮದ ಸ್ವರೂಪವನ್ನು ಎಲ್ಲಾ ರೀತಿಯಿಂದಲೂ ಪುನಃ ಪುನಃ ತಿಳಿಸುತ್ತವೆಯೋ) ಎಂದು ಹಿಂದೆ ತಿಳಿಸಿದಂತಹ ಪರಬ್ರಹ್ಮಸ್ವರೂಪದ ಜ್ಞಾನ ಮತ್ತು ಪ್ರಾಪ್ತಿಯು ಆಗುವುದಿಲ್ಲ. ಹೀಗೆ ಅಪವಿತ್ರನಾದ ಜೀವನಿಗೆ ಇಷ್ಟಸಿದ್ಧಿಯಾಗುವುದಿಲ್ಲ. ಅವನು ಜನನಮರಣ ಪ್ರವಾಹದಲ್ಲಿಯೇ ಮತ್ತೂ ಮತ್ತೂ ನರಳುತ್ತಾ ಇರಬೇಕಾಗುತ್ತದೆ. ಹೀಗೆ ಅನಿಷ್ಟವು ತಪ್ಪಿದ್ದಲ್ಲ.

**ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ ಸದಾ ಶುಚಿಃ ।**
**ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ॥ 8 ॥**

**ವಿಜ್ಞಾನವಾನ್ ಬುದ್ಧಿರೂಪಸಾರಥಿಯುಕ್ತಃ । ಸಮನಸ್ಕಃ ವಶೀಕೃತಮನಸ್ಕಃ । ಶುಚಿರಿತಿ । ವಿಷಯಾಲಂಪಟತ್ವಾದಿತಿ ಭಾವಃ । ಭೂಯಃ ಪುನರಿತ್ಯರ್ಥಃ ॥ 8 ॥**

ಜೀವನು ಹಿಂದೆ ಹೇಳಿದ ಬುದ್ಧಿಯೆಂಬ ಸಾರಥಿಯಿಂದ ಕೂಡಿರಬೇಕು. ಮನಸ್ಸನ್ನು ನಿಗ್ರಹಿಸಿರಬೇಕು. ವಿಷಯೋಪಭೋಗದಲ್ಲಿ ಆಶೆಯನ್ನು ತೊರೆದು ಯಾವಾಗಲೂ ಪವಿತ್ರನಾಗಿರಬೇಕು. ಹೀಗೆ ಇರುವ ಜೀವನು ಹಿಂದೆ ಹೇಳಿದ ಪರಬ್ರಹ್ಮಸ್ವರೂಪವನ್ನು ಹೊಂದುತ್ತಾನೆ. ಅದನ್ನು ಹೊಂದಿದ ಮೇಲೆ ಪುನಃ ಜನನ ಮರಣ ಪ್ರವಾಹರೂಪವಾದ ಸಂಸಾರವನ್ನು ಪ್ರವೇಶಿಸುವುದಿಲ್ಲ.

**ಏವಂ ಪ್ರತ್ಯಾಹಾರಾಭಾವಭಾವಯೋಃ ಅನರ್ಥಪ್ರಾಪ್ತೀಷ್ಟಪ್ರಾಪ್ತೀ ನಿರೂಪ್ಯ ಪ್ರತ್ಯಾಹಾರರೂಪಂ ಸಾಧನಂ ಫಲೋಕ್ತ್ಯಾ ನಿರ್ಧಾರಯತಿ – ವಿಜ್ಞಾನೇತಿ ।**

**ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ನರಃ ।**
**ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್ ॥ 9 ॥**

**ವಶೀಕೃತೇಂದ್ರಿಯವಾನಿತ್ಯಪಿ ಜ್ಞೇಯಮ್ । ಸಾರಥಿಪ್ರಗ್ರಹವತ್ತ್ವೋಕ್ತ್ಯೈವ ವಶೀಕೃತೇಂದ್ರಿಯತ್ವಂ ಲಬ್ಧಮಿತಿ ತದನುಕ್ತಿಃ । ಅಧ್ವನಃ ಸಂಸಾರಪದವ್ಯಾಃ ಪಾರಂ ತೀರಭೂತಂ ತದ್ವಿಷ್ಣೋಃ ಪರಮಂ ಪದಂ ಸ್ವರೂಪಮಾಪ್ನೋತೀತಿ ॥ 9 ॥**

ಇಂದ್ರಿಯಗಳನ್ನು ವಿಷಯಗಳಕಡೆಗೆ ಹರಿಯಬಿಡದೆ ಇರುವುದೇ ಪ್ರತ್ಯಾಹಾರವೆಂದೂ, ಅದನ್ನು ಸಾದಿಸದಿದ್ದರೆ ಆಗುವ ತೊಂದರೆಯನ್ನೂ, ಸಾಧಿಸಿದರೆ ಆಗುವ ಇಷ್ಟಸಿದ್ಧಿಯನ್ನೂ, ತಿಳಿಸಿದ್ದಾಯಿತು. ಪ್ರತ್ಯಾಹಾರದಿಂದ ಉಂಟಾಗತಕ್ಕ ಸಿದ್ಧಿಯು ಸಾಮಾನ್ಯವಲ್ಲ, ಅದನ್ನು ಸಾದಿಸಲು ಜೀವನು ಅವಶ್ಯವಾಗಿ ಪ್ರಯತ್ನ ಪಡಲೇಬೇಕು ಎಂದು ಹೇಳುತ್ತಾರೆ.

ಜೀವನು ಸಾರಾಸಾರ ವಿವೇಕವೆಂಬ ವಿಜ್ಞಾನವನ್ನೇ ಸಾರಥಿಯನ್ನಾಗಿ ಮಾಡಿಕೊಳ್ಳಬೇಕು. ವಿಜ್ಞಾನ ಸಾರಥಿಯು ಮನಸ್ಸೆಂಬ ಕಡಿವಾಣದ ಹಗ್ಗವನ್ನು ಸರಿಯಾಗಿ ಹಿಡಿದರೆ ಇಂದ್ರಿಯಗಳೆಂಬ ಅಶ್ವಗಳು ಸ್ವಾಧೀನವಾಗದೇ ಇರುತ್ತ-ವೆಯೇ ? ಇಂತಹ ಜೀವನು ಸಾವಿರಾರು ಜನ್ಮಗಳಲ್ಲಿ ತಾನು ಸವೆಸಿದ ಸಂಸಾರವೆಂಬ ಮಾರ್ಗದ ಕೊನೆಯನ್ನು ಮುಟ್ಟು-ತ್ತಾನೆ. ಮಾರ್ಗದ ತುದಿಗೆ ಸೇರಿದ ನಂತರ ಪುನಃ ನಡೆದ ದಾರಿಯಲ್ಲೇ ಹಿಂತಿರುಗಿ ಬರುವಂತೆ ಹಿಂತಿರುಗಿ ಬರುತ್ತಾನೆಯೇ ಎಂಬ ಸಂದೇಹವೂ ಬರಬಹುದಲ್ಲವೇ ? ಆದರೆ ಅಂತಹ ಸಂದೇಹಕ್ಕೆ ಅವಕಾಶವಿಲ್ಲ, ನಮ್ಮ ಸಂಸಾರಮಾರ್ಗದ ಕೊನೆಯು ಸಂಸಾರಾತೀತನಾದ ವಿಷ್ಣುವು. ಅದನ್ನು ಮುಟ್ಟಿದರೆ ಪರುಷಮಣಿಯನ್ನು ಸೋಕಿದ ಕಬ್ಬಿಣದಂತೆ ಜೀವನ ನಿಜಸ್ವರೂಪವು ಸುವರ್ಣವಾಗುತ್ತದೆ. ಮುಕ್ತ ಅಂದರೆ ಸಂಸಾರದಿಂದ ಬಿಡುಗಡೆ ಹೊಂದಿದವನು ಎಂಬ ಹೆಸರು ಆ ಜೀವನಿಗೆ ಉಂಟಾಗುತ್ತದೆ. ಸುವರ್ಣವಾದ ಕಬ್ಬಿಣವು ಪುನಃ ಹಿಂದಿನ ರೂಪಕ್ಕೆ ಬರುವುದಿಲ್ಲವಷ್ಟೇ ? ಅದರಂತೆಯೇ ಜೀವನೂ ವಿಷ್ಣುವಿನ ಪರಮ ಪದವನ್ನು ಪಡೆದ ಮೇಲೆ ಸಂಸಾರದ ಕೊಳೆಯನ್ನು ಎಂದೂ ಪಡೆಯಲಾರನು.

**ಭಗವದ್ಧ್ಯಾನಂ ಚ ತಾರತಮ್ಯಾಂತರ್ಗತತ್ವೇನ ಕಾರ್ಯಮಿತಿ ಭಾವೇನ ದೇವತಾತಾರತಮ್ಯ-ಮಾಹ- ಇಂದ್ರಿಯೇಭ್ಯ ಇತಿ ।**

**ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿಃ ಬುದ್ಧೇರಾತ್ಮಾ ಮಹಾನ್ ಪರಃ ॥ 10 ॥**

**ಇಂದ್ರಿಯೇಭ್ಯಃ ಶ್ರೋತ್ರತ್ವಕ್‌ಚಕ್ಷೂರಸನಘ್ರಾಣವಾಕ್‌ಪಾಣಿಪಾದಪಾಯೂಪಸ್ಥೇಭ್ಯಃ, ಜ್ಞಾನೇಂ-ದ್ರಿಯಕರ್ಮೇಂದ್ರಿಯನಿಯಂತೃತಯಾ ತತ್ತನ್ನಾಮಭ್ಯಃ ಕ್ರಮಾತ್ ತತ್ತದಭಿಮಾನಿದೇವೇಭ್ಯಃ ಸೋಮ-ಕುಬೇರಸೂರ್ಯವರುಣಅಶ್ವ್ಯಗ್ನಿಇಂದ್ರಜಯಂತಯಮದಕ್ಷೇಭ್ಯಃ ಅರ್ಥಾಃ, ಶಬ್ದಸ್ಪರ್ಶರೂಪರಸಗಂಧ-ರೂಪಾಃ ಶ್ರೋತ್ರಾದಿವಿಷಯಾಃ, ತದಭಿಮಾನಿನ್ಯಃ ಸೌಪರ್ಣೀವಾರುಣೀಪಾರ್ವತೀತಿ ತಿಸ್ರೋ ದೇವ್ಯಃ, ಪರಾ ಉತ್ತಮಾ ಇತ್ಯರ್ಥಃ । ಅಭಿಮಾನಿನಯನ್ಯಾಯೇನ ಇಂದ್ರಿಯಾದಿಶಬ್ದಾನಾಂ ಅಭಿಮಾನಿಷು ಮುಖ್ಯತ್ವಾತ್ । ಶಬ್ದಾದೀನಾಂ ಪಂಚತ್ವೇಽಪಿ ಸೌಪರ್ಣೀವಾರುಣ್ಯೌ ದ್ವಯೋರ್ದ್ವಯೋರ್ದೇವತೇ, ಪಾರ್ವತೀ ತು ಏಕಸ್ಯೇತಿ ವಿವೇಕಃ । ಅರ್ಥೇಭ್ಯಃ ಅರ್ಥಾಭಿಮಾನಿನೀಭ್ಯಃ ತಿಸೃಭ್ಯೋ ದೇವೀಭ್ಯಃ, ಮನಃ ಮನೋಽಭಿಮಾನಿನೋ ರುದ್ರವೀಂದ್ರಶೇಷಾಃ ಪರಾಃ । ತೇಭ್ಯಃ ಬುದ್ಧಿಃ ಬುದ್ಧಿತತ್ವಾಭಿಮಾನಿನೀ ಸರಸ್ವತೀ ಪರಾ । ತಸ್ಯಾಃ ಮಹಾನ್ ಮಹತ್ತತ್ವಾಭಿಮಾನೀ ಆತ್ಮಾ ವಿರಿಂಚಃ ಪರಃ ॥ 10 ॥**

ಯಮಧರ್ಮರಾಜರು ಹೇಳುತ್ತಿದ್ದಾರೆ:- ನಚಿಕೇತನೇ, ಪರಮಾತ್ಮನ ಅನುಗ್ರಹವಾಗಬೇಕಾದರೆ, ಅವನ ಸಾಕ್ಷಾ-ತ್ಕಾರವಾಗಬೇಕು. ಆ ಸಾಕ್ಷಾತ್ಕಾರಕ್ಕಾಗಿ ಅವನ ಧ್ಯಾನವನ್ನು ಮಾಡಬೇಕೆಂದು ಅನೇಕಬಾರಿ ಹೇಳಿದ್ದಾಗಿದೆ. ಆದರೆ ಆ

ಧ್ಯಾನವನ್ನು ಮಾಡುವಾಗ ದೇವತೆಗಳಲ್ಲಿ ತಾರತಮ್ಯವಿದೆ. ಆ ತಾರತಮ್ಯದ ಮೇಲಿನ ಕಕ್ಷೆಯಲ್ಲಿ ಸರ್ವೋತ್ತಮನಾದ ನಾರಾಯಣನು ಇದ್ದಾನೆ ಅವನನ್ನೇ ಮುಖ್ಯವಾಗಿ ಧ್ಯಾನಿಸಬೇಕು.' ಇದಕ್ಕಾಗಿ ದೇವತೆಗಳ ತಾರತಮ್ಯವನ್ನು ಸಂಕ್ಷೇಪವಾಗಿ ತಿಳಿಸುತ್ತೇನೆ ಕೇಳು.

ಶ್ರೋತ್ರ (ಕಿವಿ), ತ್ವಕ್ (ಸ್ಪರ್ಶೇಂದ್ರಿಯ), ಚಕ್ಷುಸ್ (ಕಣ್ಣು), ರಸನ (ನಾಲಿಗೆ), ಘ್ರಾಣ (ಮೂಗು), ವಾಕ್ (ವಾಗಿಂದ್ರಿಯ), ಪಾಣಿ (ಕೈ), ಪಾದ (ಕಾಲು), ಪಾಯು (ಮಲವಿಸರ್ಜನೇಂದ್ರಿಯ ಉಪಸ್ಥ (ಗುಹ್ಯೇಂದ್ರಿಯ) ಎಂದು ಎಲ್ಲಾ ಮನುಷ್ಯರಿಗೂ ದಶೇಂದ್ರಿಯಗಳಿವೆ. (ದಶ=10). ಇವುಗಳಲ್ಲಿ ಮೊದಲನೆಯ 5 ಜ್ಞಾನೇಂದ್ರಿಯಗಳು, ಅನಂತರದ 5 ಕರ್ಮೇಂದ್ರಿಯಗಳು. ಈ ಇಂದ್ರಿಯಗಳಿಗೆ ನಿಯಾಮಕರಾಗಿ ಆಯಾ ಇಂದ್ರಿಯಗಳ ಹೆಸರುಳ್ಳ ದೇವತೆಗಳಿದ್ದಾರೆ. ಆ ದೇವತೆಗಳಿಗೆ ಶ್ರವಣ (ಕೇಳುವುದು) ರಸನ (ರುಚಿ ನೋಡುವುದು) ಘ್ರಾಣ (ವಾಸನೆ ತಿಳಿಯುವುದು) ಮತಾಡುವುದು, ಕೈಯಿಂದ ಕೆಲಸ ಮಾಡುವುದು, ಕಾಲುಗಳಿಂದ ಚಲಿಸುವುದು, ಮಲವನ್ನು ವಿಸರ್ಜಿಸುವುದು, ರೇತಸ್ಸನ್ನು ವಿಸರ್ಜಿಸುವುದು, ಅದರ ಮೂಲಕ ಆನಂದ ಮತ್ತು ಸಂತತಿಯನ್ನು ಪಡೆಯುವುದು ಎಂಬ ಆಯಾ ಕರ್ತವ್ಯವನ್ನು ನೆರವೇರಿಸುವುದರಿಂದ ಕ್ರಮವಾಗಿ ಶ್ರೋತ್ರ ಮುಂತಾದ ಹೆಸರುಗಳಿವೆ. ಅವುಗಳಲ್ಲಿ ಕ್ರಮವಾಗಿ ಶ್ರೋತ್ರಗಳಿಗೆ ಚಂದ್ರ, ತ್ವಕ್ಕಿಗೆ ಕುಬೇರ, ಚಕ್ಷುಸ್ಸಿಗೆ ಸೂರ್ಯ ರಸನಗೆ (ನಾಲಿಗೆಗೆ) ವರುಣ, ಘ್ರಾಣಕ್ಕೆ (ಮೂಗಿಗೆ) ಅಶ್ವಿನೀ ದೇವತೆಗಳು, ವಾಕ್ಕಿಗೆ ಅಗ್ನಿ, ಪಾದಗಳಿಗೆ ಜಯಂತ, ಪಾಯುವಿಗೆ (ವಿಸರ್ಜನೇಂದ್ರಿಯ) ಯಮ, ಗುಹ್ಯೇಂದ್ರಿಯಕ್ಕೆ ದಕ್ಷಪ್ರಜಾಪತಿ ಇವರು ಕ್ರಮವಾಗಿ ಅಭಿಮಾನಿ ದೇವತೆಗಳು.

ಈ ದೇವತೆಗಳಿಗಿಂತಲೂ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಶ್ರೋತ್ರ, ತ್ವಕ್, ಚಕ್ಷುಸ್, ರಸನ, ಘ್ರಾಣಗಳೆಂಬ ಇಂದ್ರಿಯಗಳ ವಿಷಯಗಳಿಗೆ ಅಭಿಮಾನಿಗಳಾದ ಗರುಡಪತ್ನಿಯಾದ ಸೌಪರ್ಣೀ, ವರುಣ ಪತ್ನಿಯಾದ ವಾರುಣೀ, ಪರಮೇಶ್ವರನ ಪತ್ನಿಯಾದ ಪಾರ್ವತೀ ದೇವಿಯರು ಉತ್ತಮರು.★

ಅರ್ಥಾಭಿಮಾನಿಗಳಾದ ಈ ಮೂರು ದೇವಿಯರಿಗಿಂತಲೂ ಮನೋಽಭಿಮಾನಿಗಳಾದ ರುದ್ರ, ಗರುಡ, ಶೇಷರು ಉತ್ತಮರು.

ಇವರಿಗಿಂತಲೂ ಬುದ್ಧಿತತ್ತ್ವಾಭಿಮಾನಿಯಾದ ಸರಸ್ವತೀದೇವಿಯು ಉತ್ತಮಳು.

ಅವಳಿಗಿಂತಲೂ ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖ ಬ್ರಹ್ಮನು ಉತ್ತಮನು.

---

★ 1 ವಿಶೇಷಾಂಶ – 1 ಇಲ್ಲಿ ಇಂದ್ರಿಯಗಳಿಂದ ಅರ್ಥ ಅಂದರೆ ವಿಷಯಗಳು ಉತ್ತಮ ಎಂದು ಇಷ್ಟೇ ಹೇಳಿದ್ದರೂ ಅಭಿಮಾನ್ಯಧಿಕರಣನ್ಯಾಯದಿಂದ ಆಯಾ ವಸ್ತುಗಳ ಅಭಿಮಾನದೇವತೆಗಳನ್ನೇ ಇಟ್ಟುಕೊಳ್ಳಬೇಕು. ಓಂ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಓಂ' ಬ್ರ. ಸೂ. ಅ. 2 ಪಾದ 1 ಅಧಿ. 3, ಸೂ. 6. ಮೃದ್ ಅಬ್ರವೀತ್, ಆಪೋಽಬ್ರುವನ್. ಶ. ಬಾ. 6-1-3. ಇತ್ಯಾದಿ ಶ್ರುತಿಗಳಲ್ಲಿ ಮಣ್ಣು ಮಾತಾಡಿತು, ನೀರು ಮಾತಾಡಿತು, ಎಂದು ಅರ್ಥವಾಗುತ್ತದೆ. ಆದರೆ ಅದು ಸರಿಯಲ್ಲ. ಮಣ್ಣುಮಾತಾಡಲಾರದಷ್ಟೇ ? ಆದುದರಿಂದ ಇಲ್ಲಿರುವ ಮೃತ್, ಅಪ್ ಇತ್ಯಾದಿ ಪದಗಳಿಗೆ ಮೃದಭಿಮಾನಿದೇವತೆ ಅಪ್ ತತ್ತ್ವಕ್ಕೆ ಅಭಿಮಾನಿದೇವತೆ ಎಂದು ಅರ್ಥ ಹೇಳಬೇಕು. ಏಕೆಂದರೆ ಆ ದೇವತೆಗಳಿಗೆ ಮಾತ್ರ ಮಾತಾಡುವಿಕೆ ಮುಂತಾದ ಕಾರ್ಯಶಕ್ತಿಗಳೂ ಮತ್ತು ತಮ್ಮಿಂದ ಅಭಿಮಾನಕ್ಕೆ ಒಳಗಾದ ವಸ್ತುಗಳಲ್ಲಿ ಎಲ್ಲೆಡೆಯಲ್ಲಿಯೂ ವ್ಯಾಪ್ತಿಯೂ ಇದೆ. ಜಡವಾದ ಮಣ್ಣು ನೀರು ಮುಂತಾದವುಗಳಿಗಿಲ್ಲ. ಎಂದು ಸಿದ್ಧಾಂತ ಮಾಡಿದ್ದಾರೆ. ಇದೇ ಅಭಿಮಾನ್ಯಧಿಕರಣ ನ್ಯಾಯ.

★ ವಿಶೇಷಾಂಶ 2– ಇಲ್ಲಿ ಶಬ್ದಾದಿ ವಿಷಯಗಳು, 5, ಸೌಪರ್ಣಿ, ಮುಂತಾದ ಅಭಿಮಾನಿದೇವತೆಗಳು ಮೂರು ಮಂದಿ ಇದ್ದಾರೆ. ಆದುದರಿಂದ ಶಬ್ದಸ್ಪರ್ಶಗಳಿಗೆ ಸೌಪರ್ಣೀ, ರೂಪರಸಗಳಿಗೆ ವಾರುಣೀ, ಗಂಧಕ್ಕೆ ಪಾರ್ವತೀ ಇವರು ಕ್ರಮವಾಗಿ ಅಭಿಮಾನಿದೇವತೆಗಳೆಂದು ತಿಳಿಯಬೇಕು.

**ಮಹತಃ ಪರಮವ್ಯಕ್ತಮ್ ಅವ್ಯಕ್ತಾತ್ ಪುರುಷಃ ಪರಃ ।**

**ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ ॥ 11 ॥**

**ಮಹತಃ ಚತುರ್ಮುಖಾದ್ ಅವ್ಯಕ್ತಂ ಪ್ರಕೃತ್ಯಭಿಮಾನಿನೀ ಶ್ರೀಃ ಪರಾ । ಅವ್ಯಕ್ತಾತ್ ಶ್ರೀತತ್ತ್ವಾತ್ ಪುರುಷಃ ಪೂರ್ಣತ್ವಹೇತುನಾ ಪುರುಷನಾಮಾ ವಿಷ್ಣುಃ ಪರಃ । ಪುರುಷಾತ್ಪರಂ ಕಿಂಚಿನ್ನಾಸ್ತಿ । ಸಾ ಪುರುಷಃ ಕಾಷ್ಠಾ ಅವಧಿಃ ದೇವತಾತಾರತಮ್ಯವಿಶ್ರಾಂತಿಭೂಮಿಃ । ಸೇತಿ ವಿಧೇಯಾಪೇಕ್ಷಯಾ ಸ್ತ್ರೀಲಿಂಗೋಕ್ತಿಃ । ಪರಾ ಗತಿಃ ಪರಮಪ್ರಾಪ್ಯಃ ॥ 11 ॥**

ಮಹತ್ತತ್ವಾಭಿಮಾನಿಯಾದ ಚತುರ್ಮುಖನಿಗಿಂತಲೂ ಪ್ರಕೃತಿ ತತ್ತ್ವಾಭಿಮಾನಿಯಾದ ಲಕ್ಷ್ಮೀದೇವಿಯು ಉತ್ತಮಳು. ಅವಳಿಗಿಂತಲೂ ಷಡ್ಗುಣೈಶ್ವರ್ಯಸಂಪನ್ನವಾದ 'ಪುರುಷ' ಎಂಬ ಹೆಸರುಳ್ಳ ಶ್ರೀಮನ್ನಾರಾಯಣನು ಸರ್ವೋತ್ತಮನು. ಅವನಿಗಿಂತ ಉತ್ತಮವಾದುದು ಯಾವುದೂ ಇಲ್ಲ. ಆ ಪುರುಷೋತ್ತಮನೇ ದೇವತೆಗಳ ತಾರತಮ್ಯಕ್ಕೆ ವಿಶ್ರಾಂತಿ ಭೂಮಿಯು. ಅವನೇ ಪರಮಗತಿಯೂ ಆಗಿದ್ದಾನೆ. ॥ 11 ॥

**ಏವಂವಿಧಃ ಕಶ್ಚಿದಸ್ತಿ ಚೇತ್ ಕುತೋ ನೋಪಲಭ್ಯತ ಇತ್ಯತ ಆಹ- ಏಷ ಇತಿ ।**

**ಏಷ ಸರ್ವೇಷು ಭೂತೇಷು ಗೂಢೋಽತ್ಮಾ ನ ಪ್ರಕಾಶತೇ ।**

**ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ॥ 12 ॥**

**ಗೂಢೋಽತ್ಮಾ ಅಂತರ್ಹಿತಸ್ವರೂಪಃ ಸನ್ ನ ಪ್ರಕಾಶತೇ । ತರ್ಹಿ ಕಿಂ ದರ್ಶನಾರ್ಥಂ ಪ್ರಯತ್ನೇ-ನೇತ್ಯತ ಉಕ್ತಂ - ದೃಶ್ಯತ ಇತಿ । ತುರ್ಭಗವತ್ಪ್ರಸಾದರೂಪಹೇತುದ್ಯೋತಕಃ । ಅಗ್ರ್ಯಯಾ ಶ್ರವಣಾದಿ-ಜನಿತಯಾ ಭಗವತ್ಪ್ರಸಾದಸಧ್ರೀಚೀನಯಾ ಸೂಕ್ಷ್ಮಯಾ ಬುದ್ಧ್ಯಾ ಸೂಕ್ಷ್ಮದರ್ಶಿಭಿಃ ದೃಶ್ಯತ ಇತ್ಯರ್ಥಃ । ॥ 12 ॥**

ಪ್ರ:- ''ಇಂತಹ ಸರ್ವೋತ್ತಮನಾದ ಪರಮಾತ್ಮನು ಇದ್ದಾನೆ ಎನ್ನುವುದಾದರೆ ಅವನು ನಮಗೇಕೆ ಕಾಣಲು ಸಿಗುವುದಿಲ್ಲ.'' ಎಂದು ಕೆಲವರು ಪ್ರಶ್ನೆ ಮಾಡುತ್ತಾರೆ. ಇದಕ್ಕೇನು ಉತ್ತರವನ್ನು ಹೇಳಬೇಕು ?

ಉ:- ಹೌದು. ಪರಮಾತ್ಮನು ಅಜ್ಞಾನಿಗಳ ಸಾಧಾರಣದೃಷ್ಟಿಗೆ ಗೋಚರನಾಗುವುದಿಲ್ಲ. ಅವನು ಹಿಂದೆ ಹೇಳಿದಂತೆ ಎಲ್ಲಾ ಜೀವರ ಹೃದಯಗುಹೆಗಳಲ್ಲಿ ಮರೆಯಾಗಿ ಇರುತ್ತಾನೆ. ಅವನು ಎಲ್ಲರಿಗೂ ಗೋಚರವಾಗುವುದಿಲ್ಲ. ಆದರೂ ಅವನನ್ನು ನೋಡುವುದಕ್ಕೋಸ್ಕರ ನಾವು ಪ್ರಯತ್ನ ಮಾಡಬೇಕು. ನಾವು ಅಮಾಯಿಕವಾದ (ನಿಷ್ಕಪಟ) ಪ್ರಯತ್ನ ಮಾಡುತ್ತಾ ಅವನಲ್ಲಿ ದೃಢವಾದ ಭಕ್ತಿಯನ್ನು ಮಾಡುತ್ತಿದ್ದರೆ. ಅವನು ನಮ್ಮಲ್ಲಿ ಪ್ರಸನ್ನನಾಗುತ್ತಾನೆ. ಭಕ್ತಿಸಹಿತವಾದ ಶ್ರವಣ, ಮನನ, ಮತ್ತು ನಿಧಿಧ್ಯಾಸನಗಳಿಂದ ಪರಮಾತ್ಮನ ಪ್ರಸಾದ ಉಂಟಾಗುತ್ತದೆ. ಆ ಪರಮಾತ್ಮನ ಅನುಗ್ರಹದಿಂದ ಕೂಡಿದ ಸೂಕ್ಷ್ಮವಾದ ಬುದ್ಧಿಯಿಂದ ಸೂಕ್ಷ್ಮನಾದ ಪರಮಾತ್ಮನನ್ನು ತಿಳಿಯುವ ಯೋಗ್ಯತೆಯುಳ್ಳ ಜ್ಞಾನಿಗಳು ಮಾತ್ರವೇ ಅವನನ್ನು ನೋಡುತ್ತಾರೆ. ಅವನು ಎಲ್ಲರಿಗೂ ಎಲ್ಲಾ ರೀತಿಯಿಂದಲೂ ಅಗೋಚರನಲ್ಲ. ಅವನು ಇದ್ದಾನೆ ಎಂಬ ವಿಷಯದಲ್ಲಿ ಜ್ಞಾನಿಗಳ ಪ್ರತ್ಯಕ್ಷವು ಪ್ರಮಾಣವಾಗಿದೆ.

ಪೂರ್ವತ್ರ ಭಗವತಃ ಸರ್ವೋತ್ತಮತ್ವೇನ ಪೂರ್ವಪೂರ್ವಸ್ಮಾತ್ ಉತ್ತರೋತ್ತರೇಷಾಂ ಉತ್ತಮತ್ವೇನ ಚ ಧ್ಯಾನಂ ಕಾರ್ಯಮಿತಿ ಭಾವೇನ ತಾರತಮ್ಯಮುಕ್ತಮ್ । ನ ಕೇವಲಂ ತಾವದೇವ ಕಿಂತು ಪೂರ್ವಪೂರ್ವೇಷಾಂ ಉತ್ತರೋತ್ತರನಿಯತತ್ವಂ ಚ ಧ್ಯೇಯಮಿತಿ ಭಾವೇನಾಹ - ಯಚ್ಛೇದಿತಿ ।

**ಯಚ್ಛೇದ್ವಾಙ್ಮನಸಿ ಪ್ರಾಜ್ಞಃ ತದ್ಯಚ್ಛೇದ್ ಜ್ಞಾನ ಆತ್ಮನಿ ।**
**ಜ್ಞಾನಮಾತ್ಮನಿ ಮಹತಿ ತದ್ಯಚ್ಛೇಚ್ಛಾಂತ ಆತ್ಮನಿ ॥ 13 ॥**

ಪ್ರಾಜ್ಞಃ ಜ್ಞಾನೀ ಇಂದ್ರಿಯಾಭಿಮಾನಿನಃ ಪ್ರಾಗುಕ್ತಾನ್ ಸೋಮಾದೀನ್ ವಾಚಿ ವಾಗಭಿಮಾನಿನೀಷು ಪಾರ್ವತೀವಾರುಣೀಸೌಪರ್ಣೀಷು ಯಚ್ಛೇದಿತಿ ಆದೌ ಯೋಜ್ಯಮ್ । ನಿಯಮನಂ ನಾಮ ತದಧೀನತ್ವಚಿಂತನಮ್ । ತನ್ನಿಯತಾನ್ ಚಿಂತಯೇದಿತ್ಯರ್ಥಃ ॥ ಏವಮಗ್ರೇಽಪಿ । ವಾಙ್ಮನಸೀತ್ಯತ್ರ ವಾಚಂ ವಾಗಭಿಮಾನಿನೀಃ ಉಮಾದ್ಯಾಸ್ತಿಸ್ರೋ ದೇವೀಃ ಮನಸಿ ಮನೋಽಭಿಮಾನಿಷು ಶಿವಶೇಷಸುಪರ್ಣೇಷು ಯಚ್ಛೇತ್ ತನ್ನಿಯತತ್ವೇನ ಧ್ಯಾಯೇತ್ । ತತ್ ಮನೋ ಮನೋಽಭಿಮಾನಿನಃ ಶಿವಶೇಷಸುಪರ್ಣಾನ್ ತ್ರೀನ್ ಜ್ಞಾನೇ ಆತ್ಮನಿ ಜ್ಞಾನಾಭಿಮಾನಿನ್ಯೋಃ ಸರಸ್ವತೀಭಾರತ್ಯೋಃ ಯಚ್ಛೇತ್ । ಜ್ಞಾನಂ ಜ್ಞಾನಾಭಿಮಾನಿನ್ಯೌ ಸರಸ್ವತೀಭಾರತ್ಯೌ ಮಹತಿ ಮಹತ್ತತ್ವಾಭಿಮಾನಿನೋಃ ಆತ್ಮನಿ ಆತ್ಮಶಬ್ದೋದಿತಯೋಃ ವಿರಿಂಚವಾಯ್ವೋಃ ಯಚ್ಛೇತ್ । ತತ್ ಮಹತ್ತತ್ತ್ವಾಭಿಮಾನಿದ್ವಯಂ ಶಾಂತೇ ಸುಖರೂಪೇ ಆತ್ಮನಿ ಪರಮಾತ್ಮನಿ ಯಚ್ಛೇತ್ । ಪ್ರಾಜ್ಞ ಇತಿ ಸರ್ವತ್ರಾನುಷಂಗಃ । ಅತ್ರ ತದ್ಯಚ್ಛೇದವ್ಯಕ್ತೇ, ತಚ್ಚ ಶಾಂತ ಆತ್ಮನೀತಿ ವಕ್ತವ್ಯೇಽಪಿ ಅವ್ಯಕ್ತತತ್ತ್ವಾಭಿಮಾನಿನಃ ಶ್ರೀತತ್ತ್ವಸ್ಯ ಸ್ವಭರ್ತೃನಿಯತತ್ವಂ ಚ ಸಿದ್ಧಮೇವೇತಿ ನೋಕ್ತಮ್ । ಅಧ್ಯಾಹಾರೋ ವಾ ಬೋಧ್ಯಃ । ತಥಾ ಹಿ ಭಾಷ್ಯಮ್ । 'ತಾಂ ರಮಾಯಾಂ ಪರಾನಂದೇ ತಾಂ ವಿಷ್ಣೌ ಪರಮಾತ್ಮನಿ' ಇತಿ ॥ 13 ॥

ಹಿಂದೆ ನಾವು ಇಂದ್ರಿಯ-ಅರ್ಥ ಮುಂತಾದವುಗಳಿಗೆ ಅಭಿಮಾನಿಗಳಾದ ದೇವತೆಗಳಲ್ಲಿ ಹಿಂದು ಹಿಂದಿನವರಿಗಿಂತ ಮುಂದು ಮುಂದಿನವರು ಉತ್ತಮರೆಂದು ಧ್ಯಾನಮಾಡಬೇಕೆಂದೂ, ಪರಮಾತ್ಮನು ಎಲ್ಲರಿಗಿಂತಲೂ ಉತ್ತಮನೆಂದು ಧ್ಯಾನಿಸಬೇಕೆಂದೂ ತಿಳಿಸಲು ದೇವತೆಗಳ ತಾರತಮ್ಯವನ್ನು ಹೇಳಿದ್ದೇವೆ. ಅದರ ಜೊತೆಗೇ ತಿಳಿಯಬೇಕಾದ ಇನ್ನೊಂದು ವಿಷಯವೂ ಇದೆ. ಹಿಂದು ಹಿಂದಿನ ದೇವತೆಗಳು ತಮಗಿಂತಲೂ ಉತ್ತಮರಾದ ಮುಂದಿನ ದೇವತೆಗಳಿಗೆ ಅಧೀನರಾಗಿ ಅವರ ಅಪ್ಪಣೆಯಂತೆ ಕಾರ್ಯಗಳಲ್ಲಿ ತೊಡಗುತ್ತಾರೆ ಎಂದೂ ತಿಳಿಯಬೇಕು. ಅದನ್ನು ವಿವರವಾಗಿ ಇಲ್ಲಿ ತಿಳಿಸುತ್ತೇವೆ.

ಜ್ಞಾನಿಯು ಶ್ರೋತ್ರಾದಿ ಇಂದ್ರಿಯಗಳಿಗೆ ಅಭಿಮಾನಿಗಳಾದ ಚಂದ್ರ ಮುಂತಾದವರು, ಅರ್ಥಾಭಿಮಾನಿಗಳಾದ ಪಾರ್ವತೀ, ವಾರುಣೀ ಮತ್ತು ಸೌಪರ್ಣಿಯರ ನಿಯಮಕ್ಕೆ ಒಳಪಟ್ಟಿರುವರೆಂದು ತಿಳಿಯಬೇಕು. ಇಲ್ಲಿ ನಿಯಮನವೆಂದರೆ ಪೂರ್ವೋಕ್ತದೇವತೆಗಳು ಮುಂದೆ ಹೇಳಿದ ದೇವತೆಗಳ ಅಧೀನರು ಎಂಬುದಾಗಿ ಚಿಂತಿಸುವುದು. ವಾಕ್ ಅಂದರೆ ಅರ್ಥಾಭಿಮಾನಿಗಳಾದ ಪಾರ್ವತೀ ಮುಂತಾದ ಮೂರು ಮಂದಿ ದೇವತೆಗಳು ಮನೋಽಭಿಮಾನಿಗಳಾಧ ರುದ್ರ ಶೇಷ ಗರುಡನ ಅಧೀನರೆಂಬುದಾಗಿ ಚಿಂತಿಸಬೇಕು. ಮನೋಽಭಿಮಾನಿಗಳಾಧ ಈ ಮೂರು ದೇವತೆಗಳನ್ನು ಜ್ಞಾನಾತ್ಮರು

ಅಂದರೆ ಜ್ಞಾನಾಭಿಮಾನಿಗಳಾದ ಸರಸ್ವತೀಭಾರತೀಯರ ಅಧೀನರೆಂದು ಚಿಂತಿಸಬೇಕು. ಜ್ಞಾನಾಭಿಮಾನಿಗಳಾಧ ಈ ಇಬ್ಬರು ದೇವತೆಗಳನ್ನು ಮಹದಾತ್ಮರು ಅಂದರೆ ಮಹತ್ತತ್ತ್ವಾಭಿಮಾನಿಗಳಾದ ಚತುರ್ಮುಖ ಬ್ರಹ್ಮ ಮತ್ತು ಮುಖ್ಯಪ್ರಾಣರ ಅಧೀನರೆಂದು ಚಿಂತಿಸಬೇಕು. ಮಹತ್ತತ್ವಾಭಿಮಾನಿಗಳಾದ ಈ ಇಬ್ಬರು ದೇವತೆಗಳನ್ನು ಸುಖರೂಪನಾದುದರಿಂದ ಶಾಂತಾತ್ಮ ಎಂಬ ಹೆಸರುಳ್ಳ ಪರಬ್ರಹ್ಮನ ಅಧೀನರೆಂದು ತಿಳಿಯಬೇಕು. ಜ್ಞಾನಿಯು ಈ ಚಿಂತನವನ್ನು ಯಾವಾಗಲೂ ಮಾಡುತ್ತಿರಬೇಕು. ಅವ್ಯಕ್ತತತ್ತ್ವಾಭಿಮಾನಿಯಾದ ಲಕ್ಷ್ಮೀದೇವಿಯು ಉಳಿದ ಎಲ್ಲರಿಗೂ ನಿಯಾಮಕಗಳೆಂದು ಶಾಂತಾತ್ಮನಾದ ಶ್ರೀಮನ್ನಾರಾಯಣನ ಅಧೀನಳೆಂದೂ ಹೇಳಬೇಕಾಗಿಯೇ ಇಲ್ಲ. ಪತ್ನಿಯು ತನ್ನ ಪತಿಯು ಆಜ್ಞೆಗೊಳಪಟ್ಟಿರುವಳೆಂಬ ವಿಷಯ ಲೋಕಪ್ರಸಿದ್ಧವಾಗಿಯೂ ಇದೆಯಷ್ಟೇ ? ॥ 13 ॥

ಹೀಗೆ ಯಮ ನಚಿಕೇತಸರ ಸಂವಾದವನ್ನು ವೇದಪುರುಷನು ಇದುವರೆಗೆ ಅನುವಾದ ಮಾಡಿದ್ದಾನೆ. ಪರಮಕರುಣಾಳುವಾದ ಅವನು ತಾನೂ ಸಜ್ಜನರಿಗೆ ಹಿತೋಪದೇಶ ಮಾಡುತ್ತಿದ್ದಾನೆ.

**ಏವಂ ಯಮನಚಿಕೇತಸೋಃ ಸಂವಾದಮಿಯತಾ ಗ್ರಂಥೇನಾನೂದ್ಯ ವೇದಪುರುಷಃ ಸ್ವಯಂ ಸಾಧೂನಾಂ ಹಿತಮುಪದಿಶತಿ- ಉತ್ತಿಷ್ಠತೇತಿ ।**

**ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ (ಪರಾನ್) ನಿಬೋಧತ ।**
**ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ**
**ದುರ್ಗಂ ಪಥಸ್ತತ್ ಕವಯೋ ವದಂತಿ ॥ 14 ॥**

**ಹೇ ಸಾಧವಃ ಉತ್ತಿಷ್ಠತ ನಾನಾವಿಧವಿಷಯಚಿಂತನಾನ್ನಿವೃತ್ತಾ ಭವತ । ಜಾಗ್ರತ ಜಾಗೃತ ಆಲಸ್ಯಂ ಮುಂಚತ । ಪ್ರಾಪ್ಯ ವರಾನ್ ಮಹದ್ಭ್ಯೋ ವರಾನ್ ಪ್ರಾಪ್ಯ, ಪರಾನಿತಿ ಪಾಠೇ ಮಹತಃ ಪ್ರಾಪ್ಯ, ಭಗವಂತಂ ನಿಬೋಧತ । ನಿತರಾಂ ಬುದ್ಧ್ಯಧ್ವಂ, ಶಬ್‌ವಿಕರಣಂ ಪರಸ್ಮೈಪದಂ ಛಾಂದಸಮ್ । ಕುತೋಽಯಂ ಭಗವದ್ಬೋಧಃ ಸಂಪಾದ್ಯಃ । ಬಂಧನಿವೃತ್ತೇಃ ಭಗವದ್ಬೋಧಾದನ್ಯೇನಾಪಿ ಸಂಭವಾದಿತ್ಯತ ಆಹ, ಕ್ಷುರಸ್ಯೇತಿ । ಸಂಸೃತಿರಿತಿ ಶೇಷಃ । ಸಂಸೃತಿಃ ಕ್ಷುರಸ್ಯ ಕೇಶನಿಕೃಂತನಸಾಧನಸ್ಯ ಧಾರಾ ಧಾರೇವ ನಿಶಿತಾಽತಿತೀಕ್ಷ್ಣಾ ಬಹುಶಃ ದುಃಖಕಾರಿಣೀ ದುರತ್ಯಯಾ ದುಃಖೇನ ಅತ್ಯೇತವ್ಯಾ ತರ್ತವ್ಯಾ, ಭಗವದ್-ಬೋದನ್ಯೇನ ಅತ್ಯೇತುಮಶಕ್ಯೇತಿ ಯಾವತ್ । ಅಸ್ತ್ವೇವಂ ಸಂಸೃತಿರ್ಭಗವದ್ಬೋಧನಿವರ್ತ್ಯಾ । ಭಗವಜ್‌ಜ್ಞಾನಾರ್ಥಂ ಉತ್ಥಾನಾದಿಕಂ ಕುತಃ । ತತ್ಸುಲಭೋಪಾಯಾಂತರೇಣಾಪಿ ಸ್ಯಾದಿತ್ಯತ ಆಹ - ದುರ್ಗಮಿತಿ । ತತ್‌ಸಂಸೃತಿನಿವರ್ತಕಂ ಬ್ರಹ್ಮ ಪಥಃ ಶ್ರವಣಮನನಧ್ಯಾನರೂಪಾದ್ವೈರಾಗ್ಯಭಕ್ತ್ಯಾದ್ಯಂಗಸಹಿತಾನ್ಮಾರ್ಗಾತ್ ದುರ್ಗಂ ಅತಿಕ್ಲೇಶೇನ ಜ್ಞೇಯಮ್ । ತಥಾ ಅರ್ಚಿರಾದಿರೂಪಾದತ್ಯಾಯಾಸ ಸಂಪಾದ್ಯಾನ್ಮಾರ್ಗಾತ್ ದುರ್ಗಂ ಅತಿಯತ್ನೇನ ಗಮ್ಯಂ ಪ್ರಾಪ್ಯಂ ಚೇತಿ ಕವಯೋ ಜ್ಞಾನಿನೋ ವದಂತಿ । ನ ಚ ತಸ್ಯ ಜ್ಞಾನಪ್ರಾಪ್ತೀ ಸುಲಭೋಪಾಯಸಾಧ್ಯೇ । ನ ಚ ತಜ್ಜ್ಞಾನಪ್ರಾಪ್ತೀ ವಿನಾ ನಿಶ್ಶೇಷಬಂಧನಿವೃತ್ತಿರ್ಭವತಿ । ಅತ ಉತ್ತಿಷ್ಠತ ಜಾಗ್ರತೇತ್ಯಾದ್ಯುಕ್ತಿರ್ಯುಕ್ತೇತಿ ॥ 14 ॥**

ಎಲೈ ಸಜ್ಜನರೇ, ಏಳಿರಿ, ಅನೇಕ ವಿಧವಾದ ವಿಷಪ್ರಾಯವಾದ ಸಾಂಸಾರಿಕ ವಿಷಯಚಿಂತನವನ್ನು ಬಿಡಿರಿ. ಶ್ರೇಷ್ಠರಾದ ಜ್ಞಾನಿಗಳ ಬಳಿಗೆ ಹೋಗಿ (ನಚಿಕೇತಕುಮಾರನು ಯಮದೇವರಿಂದ ತಿಳಿದಂತೆ) ಅವರಿಂದ ಪರಮಾತ್ಮನ ಸ್ವರೂಪವನ್ನು ಚೆನ್ನಾಗಿ ತಿಳಿಯಿರಿ.

ಪರಮಾತ್ಮನ ಸ್ವರೂಪಜ್ಞಾನವು ಏತಕ್ಕಾಗಿ ಬೇಕು ? ಸಂಸಾರ ನಿವೃತ್ತಿಯು ಬೇರೆ ಯಾವುದಾದರೂ ಉಪಾಯದಿಂದ ಆಗಬಹುದಲ್ಲವೇ ಎಂಬ ಪ್ರಶ್ನೆಯನ್ನು ಯಾರಾದರೂ ಮಾಡಿದರೆ ಅದಕ್ಕೂ ವೇದಪುರುಷನು ಉತ್ತರ ಕೊಡುತ್ತಿದ್ದಾನೆ. ಸಂಸಾರವು ಕ್ಷೌರದ ಕತ್ತಿಯ ಅಲಗಿನಂತೆ ಅತ್ಯಂತ ಹರಿತವಾಗಿದೆ ಅಂದರೆ ಎಷ್ಟು ಜಾಗ್ರತೆಯಿಂದ ಧನಾದಿಸಂಗ್ರಹ ಮಾಡಿ ಸುಖವಾಗಿರುತ್ತೇನೆ ಎಂದು ಪ್ರಯತ್ನ ಮಾಡಿದರೂ ಅನೇಕ ದುಃಖಗಳನ್ನು ಉಂಟುಮಾಡುತ್ತದೆ. ಪರಮಾತ್ಮನ ಸರಿಯಾದ ಜ್ಞಾನದ ಹೊರತು ಬೇರೆ ಯಾವ ಉಪಾಯದಿಂದಲೂ ಈ ಸಂಸಾರವನ್ನು ದಾಟಲು ಸಾಧ್ಯವಿಲ್ಲ.

'ಆಗಲಿ, ಪರಮಾತ್ಮತತ್ತ್ವಜ್ಞಾನವಿಲ್ಲದೆ ಸಂಸಾರವು ನಿವೃತ್ತವಾಗುವುದಿಲ್ಲವೆಂದು ಒಪ್ಪಿಕೊಳ್ಳೋಣ. ಅದಕ್ಕಾಗಿ ಸಾಂಸಾರಿಕ ಭೋಗವನ್ನು ಬಿಟ್ಟು, ಮನಸ್ಸಿನ ಶಾಂತಿಯನ್ನು ಏಕೆ ಕಳೆದುಕೊಳ್ಳಬೇಕು ? ಯಾವುದಾದರೂ ಬೇರೆ ಸುಲಭೋಪಾಯದಿಂದ ಪರಮಾತ್ಮನ ಜ್ಞಾನವಾಗಲಾರದೇ ?

ಈ ಪ್ರಶ್ನೆಗೆ ವೇದಪುರುಷನ ಉತ್ತರಕೊಡುತ್ತಿದ್ದಾನೆ. ವೈರಾಗ್ಯ ಭಕ್ತಿ ಮುಂತಾದ ಅಂಗಸಹಿತವಾಗಿ ಶ್ರವಣ, ಮನನ ನಿದಿಧ್ಯಾಸನಗಳನ್ನು ಮಾಡಿ ಆ ದಾರಿಯಿಂದ ಹಿಂದೆಹೇಳಿದ ಪರಬ್ರಹ್ಮನನ್ನು ಬಹಳ ಕಷ್ಟದಿಂದ ಪಡೆಯಲು ಸಾಧ್ಯ. ತಿಳಿದ ಅನಂತರವೂ ಆ ಪರಮಾತ್ಮನ ಪ್ರಸಾದದಿಂದ ಅರ್ಚಿರಾದಿದೇವತೆಗಳ ಉತ್ತರಾಯಣಮಾರ್ಗದಿಂದ ಹೋಗಿ ಆ ಪರಬ್ರಹ್ಮನ ಸ್ವರೂಪವನ್ನು ಹೊಂದಬೇಕಾಗಿರುತ್ತದೆ. ಆದುದರಿಂದ ಪರಮಾತ್ಮಾಪರೋಕ್ಷಜ್ಞಾನವೂ, ಪರಮಾತ್ಮಪ್ರಾಪ್ತಿಯೂ ಕಷ್ಟಸಾಧ್ಯವಾದುದು ಎಂದು ಜ್ಞಾನಿಗಳು ಹೇಳುತ್ತಾರೆ. ಪರಬ್ರಹ್ಮಜ್ಞಾನ ಮತ್ತು ಪ್ರಾಪ್ತಿಗೆ ಜ್ಞಾನಿಗಳಿಂದ ಉಪದೇಶ ಪಡೆಯುವುದರ ಹೊರತು ಬೇರೆ ಸುಲಭವಾದ ದಾರಿಯಿಲ್ಲ. ಪರಮಾತ್ಮನ ಜ್ಞಾನ ಮತ್ತು ಪ್ರಾಪ್ತಿಯಾಗದೆ ಸಂಸಾರಬಂಧವು ಸಂಪೂರ್ಣವಾಗಿ ನಿವೃತ್ತಿ ಹೊಂದುವುದಿಲ್ಲ. ಆದುದರಿಂದಲೇ ಏಳಿರಿ.

ಆಲಸ್ಯವನ್ನು ಬಿಟ್ಟು ಜ್ಞಾನವೃದ್ಧರಿಂದ ಉಪದೇಶ ಪಡೆಯಿರೆಂದು ನಾನು ನಿಮಗೆ ಹೇಳುತ್ತಿದ್ದೇನೆ. ॥ 14 ॥

**ಕುತೋ ಬ್ರಹ್ಮಣೋ ದುರ್ಗಮತ್ವಂ ಇತ್ಯತಃ ತಸ್ಯ ಶ್ರೋತ್ರಾದ್ಯವಿಷಯತ್ವಾತ್ ಇತ್ಯಾಹ - ಅಶಬ್ದಮಿತಿ ।**

**ಅಶಬ್ದಮಸ್ಪರ್ಶಮರೂಪಮವ್ಯಯಂ**
**ತಥಾಽರಸಂ ನಿತ್ಯಮಗಂಧವಚ್ಚ ಯತ್ ।**
**ಅನಾದ್ಯನಂತಂ ಮಹತಃ ಪರಂ ಧ್ರುವಂ**
**ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ ॥ 15 ॥**

**ತದ್ ಬ್ರಹ್ಮ ಅಶಬ್ದಂ ಶಬ್ದಗುಣಹೀನಂ, ಇತ್ಥಮಿತಿ ಶಬ್ದಾವೇದ್ಯಂ ಚ । ಅತ್ಯಾಶ್ಚರ್ಯವಸ್ತುತ್ವಾತ್ । ಅಸ್ಪರ್ಶಂ ಸ್ಪರ್ಶಗುಣಹೀನಮ್ । ಅತ ಏವ ತ್ವಕ್‌ವಿಷಯತ್ವಹೀನಮ್ । ಅರೂಪಮತ ಏವ ಚಕ್ಷು- ರ್ಗೋಚರತ್ವಹೀನಮ್ । ಭೌತಿಕರೂಪರಾಹಿತ್ಯಾದೇವಾವ್ಯಯಂ ನಾಶಹೀನಮ್ । 'ರೂಪಾದಿಮತ್ವಾಚ್ಚ**

ವಿಪರ್ಯಯೋ ದರ್ಶನಾತ್' (ಬ್ರ.ಸೂ. 2-2-15) ಇತಿ ಸೂತ್ರೇ ಭೌತಿಕರೂಪಾದಿಮತ ಏವ ಅನಿತ್ಯತ್ವೋಕ್ತೇಃ ತಥಾಽರಸಂ ರಸಗುಣವರ್ಜಿತಂ ಚ । ಅತ ಏವ ರಸನೇಂದ್ರಿಯಾವಿಷಯಃ । ಅಗಂಧವತ್ ನಿತ್ಯಂ ಗಂಧವನ್ನ । ಅತ ಏವ ಘ್ರಾಣವಿಷಯಶ್ಚ । ಬಂಧನಿವರ್ತಕಂ ತಜ್‌ಜ್ಞಾನಂ ಕೇನ ಮಾರ್ಗೇಣ ಭವತೀತ್ಯತೋ ದುರ್ಗಂ ಪಥ ಇತ್ಯುಕ್ತಮಾಹ - ಅನಾದೀತಿ । ಅನಾದ್ಯನಂತಂ ಆದ್ಯಂತ-ವರ್ಜಿತಮ್ । ಮಹತೋ ಮಹತ್ತತ್ತ್ವಾಭಿಮಾನಿಚತುರ್ಮುಖಾತ್ ಪರಮ್ । ಧ್ರುವಂ ಶಶ್ವತ್ ಏಕಪ್ರಕಾರಂ ತಂ ತಾರತಮ್ಯಾಂತಗತ್ವೇನ ಪ್ರಾಗುಕ್ತಂ ಪುರುಷಂ, ನಿಚಾಯ್ಯ ವಿಚಾರ್ಯ ಶ್ರವಣಾ-ದಿಭಿರ್ನಿಶ್ಚಿತ್ಯ ತದಪರೋಕ್ಷಜಪ್ರಸಾದದ್ವಾರಾ ಮೃತ್ಯುಮುಖಾತ್ ಸಂಸೃತಿಬಂಧನಾತ್ ಪ್ರಕರ್ಷೇಣ ಮುಚ್ಯತೇ । ಶಬ್ದಾದ್ಯವೇದ್ಯೋಽಪಿ ಭಗವಾನ್ ಸದಾಚಾರ್ಯಸಹಾಯಲಬ್ಧಶ್ರವಣಮನನಧ್ಯಾನಾ-ವೃತ್ತ್ಯಾ ಪ್ರಸನ್ನಃ ಸ್ವಾಪರೋಕ್ಷ್ಯಂ ದತ್ತ್ವಾ ಬಂಧಾನ್ ಮೋಚಯತೀತಿ ಭಾವಃ । ತದಾಹ ಸೂತ್ರಕಾರಃ "ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್" (ಬ್ರ.ಸೂ. 3-2-26) ಇತಿ । ಅತ್ರ ಮಹತಃ ಪರಾದವ್ಯಕ್ತಾತ್ ಪರಮಿತಿ ವಕ್ತವ್ಯೇಽಪ್ಯವ್ಯಕ್ತಾಭಿಮಾನಿನ್ಯಾಃ ಸ್ವಭಾರ್ಯಾಯಾಃ ಶ್ರಿಯಃ ಪರತ್ವಂ ಸಿದ್ಧಮಿತಿ ಮಹತಃ ಪರಮಿತ್ಯೇವೋಕ್ತಮ್ । ತೇನ ಮಹತ್ಪರತ್ವಲಿಂಗಾತ್ ಅವ್ಯಕ್ತಮೇವಾತ್ರ ನಿಚಾಯ್ಯವಾಕ್ಯೇನ ಕಥ್ಯತ ಇತಿ ಪ್ರತ್ಯುಕ್ತಮ್ । ತದಾಹ ಸೂತ್ರೇ 'ವದತೀತಿ ಚೇನ್ನ ಪ್ರಾಜ್ಞೋ ಹಿ' (ಬ್ರ.ಸೂ. 2-4-5) ಇತಿ । **॥ 15 ॥**

"ಪರಮಾತ್ಮನನ್ನು ನೋಡಲು ಅಷ್ಟೊಂದು ಕ್ಲೇಶವೇಕೆ ? ಹಿಮಾಲಯದ ಶಿಖರವನ್ನು ಹತ್ತಬಲ್ಲ ಮಾನವನು ಪರಮಾತ್ಮನನ್ನು ಪತ್ತೆಹಚ್ಚಲಾರನೇ ?

ಈ ಪ್ರಶ್ನೆಗೆ ವೇದಪುರುಷನ ಉತ್ತರವನ್ನು ಕೇಳಿರಿ.

ಆ ಪರಬ್ರಹ್ಮವು ಕಿವಿ ಮುಂತಾದ ಯಾವ ಇಂದ್ರಿಯಗಳಿಗೂ ಗೋಚರವಾಗುವಂತಹ ವಸ್ತುವಲ್ಲ. ಶಬ್ದ ಎಂಬ ಗುಣವುಳ್ಳ ವಸ್ತುವಾಗಿದ್ದರೆ, ಆ ಪರಮಾತ್ಮನ ಶಬ್ದವನ್ನಾದರೂ ಕೇಳಿ ತಿಳಿಯ ಬಹುದಾಗಿತ್ತು. ಹಾಗಿಲ್ಲ ಮತ್ತು ಅದು ಹೇಗಿದೆ ಎಂದು ನಿರ್ಧಾರವಾಗಿ ಹೇಳುವ ಶಬ್ದವೂ ಇಲ್ಲ. ಅತ್ಯಾಶ್ಚರ್ಯಕರವಾದ ವಸ್ತುವಾದ್ದರಿಂದ ಅದನ್ನು ಸಂಪೂರ್ಣವಾಗಿ ವರ್ಣಿಸಲು ಯಾವ ಶಬ್ದರಾಶಿಯೂ ಸಾಲದು. ಸ್ಪರ್ಶವೆಂಬ ಗುಣವಿಲ್ಲದ್ದರಿಂದ ತ್ವಗಿಂದ್ರಿಯಕ್ಕೆ ಗೋಚರವಾಗುವುದಿಲ್ಲ. ಭೌತಿಕ ರೂಪವಿಲ್ಲದ್ದರಿಂದ ಕಣ್ಣಿಗೂ ಗೋಚರವಾಗುವುದಿಲ್ಲ. ಭೌತಿಕ ರೂಪವಿಲ್ಲದ್ದರಿಂದಲೇ ಅದು ನಾಶರಹಿತವಾಗಿದೆ.★

ಹೀಗೆಯೇ ಪರಬ್ರಹ್ಮತತ್ತ್ವವು ರಸವೆಂಬ ಗುಣವಿಲ್ಲದ್ದು ಮತ್ತು ನಾಲಿಗೆಯಿಂದ ತಿಳಿಯಬಹುದಾದ ರಸಗುಣಾ-ತ್ಮಕವೂ ಅಲ್ಲ. ಹಾಗೆಯೇ ಗಂಧ ಗುಣರಹಿತವಾದುದು ಮತ್ತು ಘ್ರಾಣೇಂದ್ರಿಯಕ್ಕೆ ವಿಷಯವೂ ಅಲ್ಲ.

ಪ್ರ:- "ಬಂಧನಿವರ್ತಕವಾದ, ಇಂತಹ ಪರಬ್ರಹ್ಮನ ಜ್ಞಾನವು ಹೇಗೆ ಆಗುತ್ತದೆ ?"

---

★ ಓಂ ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್ ಓಂ (ಬ್ರ.ಸೂ.ಅ.21 ಪಾ. 2 ಅಧಿ. 7ಸೂ. 15 ಎಂಬ ಬ್ರಹ್ಮಸೂತ್ರದಲ್ಲಿ ಭೌತಿಕ ರೂಪವುಳ್ಳ ಪದಾರ್ಥವನ್ನೇ ಅನಿತ್ಯವೆಂದು ಹೇಳಿರುತ್ತಾರೆ.)

ಉ :- ಹಿಂದೆಯೇ ''ದುರ್ಗಂ ಪಥಃ'' (ಇದೇ ವೆಲ್ಲಿಯ 14ನೇ ಮಂತ್ರ) ಎಂಬಲ್ಲಿ ಈ ವಿಷಯವನ್ನು ಪ್ರಸ್ತಾಪಿಸಲಾಗಿದೆ. ಅದನ್ನೇ ಪುನಃ ವಿವರಿಸಿ ಹೇಳುತ್ತೇನೆ ಕೇಳು.

ಆ ಪರಬ್ರಹ್ಮವು ಉತ್ಪತ್ತಿನಾಶರಹಿತವಾದುದು. ಮಹತ್ತತ್ವಾಭಿಮಾನಿಯಾದ ಚತುರ್ಮುಖಬ್ರಹ್ಮನಿಗಿಂತಲೂ ಶ್ರೇಷ್ಠವಾದುದು. ಯಾವಾಗಲೂ ಒಂದೇರೀತಿಯಲ್ಲಿರುತ್ತದೆ. ಇಂತಹ ಪರಬ್ರಹ್ಮವು ತಾರತಮ್ಯದ ಕೊನೆಯಲ್ಲಿ ಸರ್ವೋತ್ತಮವಾಗಿದೆಯೆಂದು ಶ್ರವಣ ಮನನ ನಿದಿಧ್ಯಾಸನಗಳಿಂದ ತಿಳಿಯಬೇಕು. ಅನಂತರ ಅವನ ಪರೋಕ್ಷಜ್ಞಾನ ಉಂಟಾಗುತ್ತದೆ. ಅದರಿಂದ ಪರಮಾತ್ಮನ ಪ್ರಸಾದ ಉಂಟಾಗುತ್ತದೆ. ಆ ಪ್ರಸಾದದಿಂದ ಸಂಸಾರ ಬಂಧನದಿಂದ ಸಂಪೂರ್ಣ ಬಿಡುಗಡೆಯಾಗುತ್ತದೆ.

ಒಟ್ಟಿನಲ್ಲಿ ಪರಮಾತ್ಮನಲ್ಲಿ ಶಬ್ದಾದಿಗಳಿಂದ ತಿಳಿಯಲು ಸಾಧ್ಯವಾಗದಿದ್ದರೂ ಉತ್ತಮರಾದ ಗುರುಗಳ ಸಹಾಯದಿಂದ ಶ್ರವಣ, ಮನನ ಮತ್ತು ಧ್ಯಾನಗಳನ್ನು ಪುನಃ ಪುನಃ ಮಾಡಿದರೆ ಪ್ರಸನ್ನನಾದ ಪರಮಾತ್ಮನು ತನ್ನ ಅಪರೋಕ್ಷ ಜ್ಞಾನವನ್ನು ಕೊಟ್ಟು ಬಂಧನದಿಂದ ಬಿಡುಗಡೆಮಾಡುತ್ತಾನೆ.★

**ಏವಂ ವೇದಪುರುಷಃ ಯಮನಚಿಕೇತಸ್ಸಂವಾದಂ ಅನೂದ್ಯ ಸಾಧುಶಿಕ್ಷಾಂ ಚ ಕೃತ್ವಾ ಏತದ್-ವಿದ್ಯಾಪ್ರವಚನಶ್ರವಣಯೋಃ ಫಲೋಕ್ತಿಪೂರ್ವಕಮುಪಸಂಹರತಿ – ನಾಚಿಕೇತಮಿತಿ ।**

**ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಂ ಸನಾತನಮ್ ।**
**ಉಕ್ತ್ವಾ ಶ್ರುತ್ವಾ ಚ ಮೇಧಾವೀ ಬ್ರಹ್ಮಲೋಕೇ ಮಹೀಯತೇ ॥ 16 ॥**

**ಯ ಇದಂ ಪರಮಂ ಗುಹ್ಯಂ ಶ್ರಾವಯೇದ್ ಬ್ರಹ್ಮಸಂಸದಿ ।**
**ಪ್ರಯತಃ ಶ್ರಾದ್ಧಕಾಲೇ ವಾ ತದಾನಂತ್ಯಾಯ ಕಲ್ಪತೇ ।**
**ತದಾನಂತ್ಯಾಯ ಕಲ್ಪತ ಇತಿ ॥ 17 ॥**

**ಇತಿ ಕಾಠಕೋಪನಿಷದಿ ಪ್ರಥಮಾಧ್ಯಾಯೇ ತೃತೀಯವಲ್ಲಿ ॥**

---

★ ವಿಶೇಷಾಂಶ : 1– ಓಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ಓಂ–ಬ್ರ.ಸೂ. ತೃ. ಅ. ಪಾದ 2 ಅಧಿ 14 ಸೂ. 26 ಆ ಪರಬ್ರಹ್ಮ ವಿಷಯಕವಾದ ಶ್ರವಣ ಮನನ ನಿಧಿಧ್ಯಾಸನಗಳನ್ನು ಶಾಸ್ತ್ರದಲ್ಲಿ ಹೇಳಿದಂತೆ ಆವೃತ್ತಿಯಿಂದ ಮಾಡಿದರೆ ಪರಬ್ರಹ್ಮಾಪರೋಕ್ಷ-ಜ್ಞಾನವುಂಟಾಗುತ್ತದೆ. ಆದುದರಿಂದ ಅವ್ಯಕ್ತ ಸ್ವಭಾವವುಳ್ಳ ಪರಮಾತ್ಮನ ಅಪರೋಕ್ಷಜಾನವು ಎಂದಿಗೂ ಆಗಲಾರದು ಎಂಬ ಪೂರ್ವಪಕ್ಷಕ್ಕೆ ಅವಕಾಶವಿಲ್ಲ.

ವಿಶೇಷಾಂಶ 2 – ಈ ಮಂತ್ರದಲ್ಲಿ ಪರಮಾತ್ಮನು ಮಹತ್ತತ್ವಾಭಿಮಾನಿಯಾದ ಚತುರ್ಮುಖನಿಗಿಂತ ಶ್ರೇಷ್ಠಳಾದ ಅವ್ಯಕ್ತ-ತತ್ತ್ವಾಭಿಮಾನಿ ಲಕ್ಷ್ಮೀದೇವಿಗಿಂತ ಶ್ರೇಷ್ಠನು ಪರಮಾತ್ಮನು. 'ಮಹತಃ ಪರಾತ್ ಅವ್ಯಕ್ತಾತ್ ಪರಂ' ಎಂದು ಹೇಳಬೇಕಾಗಿತ್ತು. ಆದರೂ ಅವ್ಯಕ್ತಾಭಿಮಾನಿಯಾದ ಲಕ್ಷ್ಮೀದೇವಿಯು ಪರಮಾತ್ಮನ ಭಾರ್ಯೆಯದುದರಿಂದ ಲಕ್ಷ್ಮೀದೇವಿಯು ಪರಮಾತ್ಮನ ಭಾರ್ಯೆಯದುದರಿಂದ, ಭಾರ್ಯೆಗಿಂತಲೂ ಪತಿಯು ಶ್ರೇಷ್ಠನೆಂದು ನ್ಯಾಯಸಮ್ಮತವು ಮತ್ತು ಲೋಕಪ್ರಸಿದ್ಧವಾದುದರಿಂದ ಹೇಳಲಿಲ್ಲ. ಆದುದರಿಂದ ಮಹತ್‌ಗಿಂತ ಪರವಾದುದು ಅವ್ಯಕ್ತವಾದುದರಿಂದ ಅವ್ಯಕ್ತವೇ ಮುಮುಕ್ಷುಗಳಿಂದ ಉಪಾಸ್ಯ ಎಂಬ ಪೂರ್ವಪಕ್ಷಕ್ಕೆ ಅವಕಾಶವಿಲ್ಲ.

**ನಚಿಕೇತಸಃ ಸಂಬಂಧ್ಯುಪಾಖ್ಯಾನಂ ತಚ್ಚರಿತಪ್ರತಿಪಾದಕಗ್ರಂಥಸಂದರ್ಭಮ್ । ಸಲೋಪಃ ಛಾಂದಸಃ । ವ್ಯಕ್ತೋ ಮಂತ್ರದ್ವಯಾರ್ಥಃ । ದ್ವಿರುಕ್ತಿರಾದರಾರ್ಥಾ, ಪ್ರೋಕ್ತಸರ್ವಾವಧಾರಣಾರ್ಥಾ ಚ ॥ 16 ॥ 17 ॥**

***ಇತಿ ಕಾಠಕಾರ್ಥಸಂಗ್ರಹೇ ಪ್ರಥಮಾಧ್ಯಾಯೇ ತೃತೀಯಾ ವಲ್ಲೀ ॥***

***ಇತಿ ಪ್ರಥಮೋಽಧ್ಯಾಯಃ ॥***

ಹೀಗೆ ವೇದಪುರುಷನು ಯಮ – ನಚಿಕೇತರ ಸಂವಾದವನ್ನು ಅನುವಾದಮಾಡಿ, ಈ ವೇದಾಂತವಿದ್ಯೆಯನ್ನು ಯಾರು ಪ್ರವಚನ ಮಾಡುತ್ತಾರೋ ಯಾರು ಕೇಳುತ್ತಾರೋ ಅವರಿಗೆ ಉಂಟಾಗುವ ಫಲವನ್ನು ಹೇಳುತ್ತಾ ಉಪನಿಷತ್ತಿನ ಪೂರ್ವ ಭಾಗವನ್ನು ಉಪ ಸಂಹರಿಸುತ್ತಾನೆ.

ನಚಿಕೇತನಿಗೆ ಸಂಬಂಧಪಟ್ಟಿರುವ ಈ ಗ್ರಂಥವು ಅವನ ಚರಿತ್ರೆಯನ್ನು ಹೇಳುತ್ತದೆ. ಇದು ಅನಾದಿನಿತ್ಯವಾದ ವೇದರೂಪವಾದುದು. ಜ್ಞಾನಿಯೂ, ಜಿಜ್ಞಾಸುವೂ ಇದರ ಪ್ರವಚನ ಮತ್ತು ಶ್ರವಣಗಳನ್ನು ಮಾಡಬೇಕು. ಹೀಗೆ ಮಾಡಿದವರು ಬ್ರಹ್ಮಲೋಕದಲ್ಲಿ ಪೂಜಿತರಾಗುತ್ತಾರೆ.

ಚೇನ್ನ ಪ್ರಾಜ್ಞೋ ಹಿ ಓಂ. ಬ್ರ.ಸೂ. ಅ. 1 ಪಾದ 4 ಅಧಿ –1 ಸೂ 5. ಮಹತಃ ಪರಂ ಧ್ರುವಂ ಎಂಬ ವಾಕ್ಯವು ಅವ್ಯಕ್ತವೇ, ಮುಕ್ತರಿಂದ ಜ್ಞೇಯವಾದುದೆಂದು ತಿಳಿಸುತ್ತದೆಂದು ಹೇಳಬಾರದು. ಅಲ್ಲಿ ಪ್ರಾಜ್ಞನಾಮಕನಾದ ಮುಕ್ತರಿಂದ ಜ್ಞೇಯನಾದ ಪರಮಾತ್ಮನನ್ನೇ ಹೇಳುತ್ತಾರೆ. ಅಣೋರಣೀಯಾನ್ (ಕಾಠಕ. ಪ್ರ. ದ್ವಿತೀಯವಲ್ಲೀ ಮಂತ್ರ 20) ಎಂಬಲ್ಲಿ ಮಹತೋ ಮಹೀಯಾನ್ ಎಂಬ ಭಾಗದಿಂದ ಪರಮಾತ್ಮನು ಮಹತ್ತತ್ತ್ವಕ್ಕಿಂತಲೂ ಶ್ರೇಷ್ಠನೆಂದು ಸಿದ್ಧವಾಗುತ್ತದೆ. ಎಂದು ಸಿದ್ಧಾಂತಿಸಿದ್ದಾರೆ.

★ ★ ★

# ಅಥ ದ್ವಿತೀಯೋಽಧ್ಯಾಯಃ

## ಪ್ರಥಮವಲ್ಲೀ

**ಪುನರಪಿ ಬ್ರಹ್ಮವಿದ್ಯಾಂ ವಕ್ತುಂ ತದಂಗತಯಾ ವೈರಾಗ್ಯಂ ದುಃಸಂಪಾದಮಿತಿ ಯತ್ನೇನ ಸಂಪಾದ್ಯ-ಮಿತಿ ಭಾವೇನಾಽಹ- ಪರಾಂಚೀತಿ ।**

**ಪರಾಂಚಿ ಖಾನಿ ವ್ಯತೃಣಾತ್ ಸ್ವಯಂಭೂಃ**
**ತಸ್ಮಾತ್ ಪರಾಕ್ ಪಶ್ಯತಿ ನಾಂತರಾತ್ಮನ್ ।**
**ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್**
**ಆವೃತ್ತಚಕ್ಷುರಮೃತತ್ವಮಿಚ್ಛನ್ ॥ 1 ॥**

**ಸ್ವಯಮೇವ ಭವತೀತಿ ಸ್ವಯಂಭೂಃ ಸ್ವತಂತ್ರೋ ಭಗವಾನ್, ತತ್ಪುತ್ರೋ ಬ್ರಹ್ಮಾ ವಾ । ಖಾನಿ ಇಂದ್ರಿಯಾಣಿ ಪರಾಂಚಿ ಪರಾಙ್ಮುಖಾನಿ, ಅತ ಏವ ವ್ಯತೃಣಾತ್ ಕುತ್ಸಿತಾನ್ಯಕರೋತ್ । 'ತೃಣು ಕಾತ್ಕರಣೇ' ಇತಿ ಧಾತೋಃ । ತಸ್ಮಾತ್ಕಾರಣಾತ್ ಪರಾಕ್ ಬಾಹ್ಯಾನ್ ವಿಷಯಾನ್ ಪಶ್ಯತಿ ಜೀವಃ । ಆತ್ಮನ್ ಆತ್ಮನಃ ಸ್ವಸ್ಯ ಅಂತಃ ನ ಪಶ್ಯತಿ । ಸದಾ ಬಹಿರ್ದೃಷ್ಟಿರೇವಾऽऽಸ್ತ ಇತ್ಯರ್ಥಃ । ಕಶ್ಚಿದ್ಧೀರೋ ಜ್ಞಾನೀ ಅಮೃತತ್ವಂ ಮುಕ್ತಿಮಿಚ್ಛನ್ ಆವೃತ್ತಚಕ್ಷುಃ, ಉಪಲಕ್ಷಣಮೇತತ್, ವಿಷಯೇಭ್ಯಃ ಪರಾವೃತ್ತಚಕ್ಷುರಾದಿ-ಕರಣಃ ಸನ್ ಪ್ರತ್ಯಗಂತಃ ಆತ್ಮಾನಂ ಸ್ವಾಂತಸ್ಥಂ ಭಗವಂತಂ ಐಕ್ಷತ್ ಈಕ್ಷತ ಇತ್ಯರ್ಥಃ । ಲಡರ್ಥೇ ಲಙ್, ಪರಸ್ಮೈಪದಂ ಛಾಂದಸಮ್ ॥ 1 ॥**

ಪ್ರಶ್ನೆ :- ಬ್ರಹ್ಮಜ್ಞಾನಕ್ಕೆ ಆವಶ್ಯಕವಾದ ಸಾಧನ ಯಾವುದು ? ಅದನ್ನು ಹೇಗೆ ಸಂಪಾದಿಸಬೇಕು ?

ಉತ್ತರ:- ವೈರಾಗ್ಯವು ಆವಶ್ಯಕ ಸಾಧನವು. ಆ ವೈರಾಗ್ಯವನ್ನು ಸಂಪಾದಿಸುವುದು ಬಹಳ ಕಷ್ಟ ಆದರೂ ಪ್ರಯತ್ನಪಟ್ಟು ಅದನ್ನು ಸಂಪಾದಿಸಬೇಕು. ಅದನ್ನು ವಿವರಿಸುತ್ತೇನೆ. ತಾನಾಗಿಯೇ ವ್ಯಕ್ತನಾಗುವ ಪರಮಾತ್ಮನಿಗೆ ಸ್ವಯಂಭೂ ಎಂದು ಹೆಸರು. ಸ್ವಯಂ ಎಂಬ ಹೆಸರಿನ ಪರಮಾತ್ಮನಿಂದ ಉತ್ಪನ್ನನಾದ ಬ್ರಹ್ಮನಿಗೆ ಸ್ವಯಂಭೂ ಎಂದು ಹೆಸರು. ಹೀಗೆ ಸ್ವಯಂಭೂ ಎಂಬ ಹೆಸರುಳ್ಳ ನಾರಾಯಣ ಮತ್ತು ಬ್ರಹ್ಮದೇವರು ಸೃಷ್ಟಿ ಮಾಡುವಾಗ ಇಂದ್ರಿಯಗಳನ್ನು ಹೊರಮುಖವಾಗಿಯೇ ಸೃಷ್ಟಿಸಿದರು. ಆದುದರಿಂದಲೇ ಜೀವನು ಇಂದ್ರಿಯಗಳಿಂದ ಹೊರಗಿನ ವಿಷಯಗಳನ್ನೇ ತಿಳಿಯುತ್ತಾನೆ. ತನ್ನೊಳಗೆ ಇರುವ ಪರಮಾತ್ಮನನ್ನು ತಿಳಿಯುವುದಿಲ್ಲ, ಬಹಿರ್ದೃಷ್ಟಿಯಾಗಿರುತ್ತಾನೆ. ಅಂದರೆ ಹೊರಗಿನ ವಿಷಯಗಳ ಜ್ಞಾನದಲ್ಲಿಯೇ ಹೆಚ್ಚಾಗಿ ಆಸಕ್ತನಾಗಿರುತ್ತಾನೆ.

ಆದರೆ ಅನೇಕ ಸಹಸ್ರ ಮಾನವರಲ್ಲಿ ಯಾವನಾದರೂ ಒಬ್ಬನು ಜ್ಞಾನಿಯು ಇರುತ್ತಾನಷ್ಟೇ ? ಅವನು ಈ ಸಂಸಾರದ ಕೋಟಲೆಯಿಂದ ಬಿಡುಗಡೆ ಹೊಂದಿ ನಿತ್ಯಸುಖವನ್ನು ಅಪೇಕ್ಷಿಸಿ ಹೊರಗಿನ ವಿಷಯಗಳಿಂದ ನಿವೃತ್ತನಾಗಿ ಒಳಗೆ ನೋಡಲು ಪ್ರಯತ್ನಿಸುತ್ತಾನೆ. ಇದೇ ವೈರಾಗ್ಯ. ವಿರಕ್ತನು ಸಮಸ್ತ ಇಂದ್ರಿಯಗಳನ್ನೂ ಹೊರಗಿನ ವಿಷಯಗಳಿಂದ ಹಿಂತಿರುಗಿಸಿ ಜೀವನಲ್ಲಿ ಅಂತರ್ಯಾಮಿಯಾಗಿರುವ ಪರಮಚೇತನನನ್ನು ನೋಡುತ್ತಾನೆ. ಹೀಗೆ ನೋಡಿದವರೂ ಅನೇಕರಿದ್ದಾರೆ. ॥ 1 ॥

**ಮುಮುಕ್ಷುಃ ಸರ್ವಥಾ ನ ವಿಷಯಪ್ರಮಾದೀ ಸ್ಯಾತ್ ಇತಿ ಭಾವೇನಾಹ- ಪರಾಚ ಇತಿ ॥**

**ಪರಾಚಃ ಕಾಮಾನನುಯಂತಿ ಬಾಲಾಃ**
**ತೇ ಮೃತ್ಯೋರ್ಯಂತಿ ವಿತತಸ್ಯ ಪಾಶಮ್ ।**
**ಅಥ ಧೀರಾ ಅಮೃತತ್ವಂ ವಿದಿತ್ವಾ**
**ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ ॥ 2 ॥**

**ಯೇ ಬಾಲಾಃ ಬಾಲಾ ಇವ ಅವಿವೇಕಿನಃ ಪರಾಚಃ ಬಾಹ್ಯಾನ್ ಕಾಮಾನ್ ಸ್ರಕ್‌ಚಂದನ-ವನಿತಾದಿವಿಷಯಾನ್ ಅನುಯಂತಿ ಅನುಸೃತ್ಯ ತಿಷ್ಠಂತಿ ಯೇ ವಿತತಸ್ಯ ಬಹುಕಾಲೀನಸ್ಯ ಮೃತ್ಯೋಃ ಅವಿದ್ಯಾಕಾಮಕರ್ಮಾದೇಃ ಪಾಶಂ ಬಂಧಂ ತತ್ಕೃತಕ್ಲೇಶಂ ಯಂತಿ ಪ್ರಾಪ್ನುವಂತಿ । ಅಥ ತಸ್ಮಾದಿಹ**

**ಲೋಕೇ ಧೀರಾ ವಿವೇಕಿನಃ ಧ್ರುವಂ ಅಮೃತತ್ವಂ ಮೋಕ್ಷಂ ವಿದಿತ್ವಾ ಜ್ಞಾತ್ವಾ ಅಧ್ರುವೇಷು ವಿತ್ತಾದಿಷು ವಿಷಯೇ ನ ಪ್ರಾರ್ಥಯಂತೇ । ತೇನ ನಚಿಕೇತಸಃ ಸ್ತುತಿರರ್ಥಾದ್ ಗಮ್ಯತೇ ॥ 2 ॥**

ಪ್ರಶ್ನೆ :- ಇಂದ್ರಿಯಗಳನ್ನು ತಡೆಯುವ ಪ್ರಯತ್ನವನ್ನು ನಾವೇಕೆ ಮಾಡಬೇಕು. ಕುದುರೆಗಳು ಓಡಿ ಓಡಿ ದಣಿದು ನಿಲ್ಲುವಂತೆ ಇಂದ್ರಿಯಗಳು ಜೀವನಿಗೆ ಅವನ ದೇಹಕ್ಕೆ ಹಿತವಾದ ವಿಷಯಗಳನ್ನು ಸಂಪಾದಿಸಿಕೊಡುತ್ತವೆ. ಅವುಗಳ ಶಕ್ತಿ ಕುಂದಿದಾಗ ತನ್ನಷ್ಟಕ್ಕೇ ವೈರಾಗ್ಯವು ಸಿದ್ಧವಾಗುತ್ತದೆಯಲ್ಲವೇ ?

ಉತ್ತರ :- ಇದು ಅವಿವೇಕಿಗಳ ಕ್ರಮ ಸಂಸಾರದಿಂದ ಬಿಡುಗಡೆಯನ್ನು ಬಯಸುವವನು ಎಂದಿಗೂ ವಿಷ-ಸಮಾನವಾದ ವಿಷಯಗಳನ್ನು ಸೇವಿಸಬಾರದು. ಇಲ್ಲಿ ವೇದಪುರುಷನ ಉಪದೇಶವನ್ನು ಕೇಳಿರಿ.

''ಮಕ್ಕಳಂತೆ ಅವಿವೇಕಿಗಳಾದುದರಿಂದ ಅನೇಕರು ವಯಸ್ಸನ್ನು ಪಡೆದಿದ್ದರೂ ''ಬಾಲಕರು'' ಎಂದೇ ಕರೆಯ-ಲ್ಪಡುತ್ತಾರೆ. ಅವರು ಮಾತ್ರವೇ ಹೊರಗಿನ ವಿಷಯಗಳನ್ನು ಕಾಮಿಸುತ್ತಾರೆ. ಮೂಗಿಗೆ ಸುವಾಸನೆಯಾದ ಹೂಮಾಲೆ ಮುಂತಾದ ಸುಗಂಧ ವಸ್ತುಗಳು, ಮೈಗೆ ತಂಪಾದ ಸುವಾಸನೆಯ ಗಂಧ, ಸುಂದರ ರೂಪಗಳಿಂದ ಸಮಸ್ತ ಇಂದ್ರಿಯಗಳ ಕಡೆಗೆ ಆ 'ಬಾಲಕರು' ಓಡುತ್ತಾರೆ. ಆ ವಿಷಯಗಳನ್ನೇ ಅನುಸರಿಸುತ್ತಾರೆ. ಹಾಗೆಯೇ ಜೀವನವನ್ನು ಕಳೆಯುತ್ತಾರೆ. ಆದರೆ ಮೃತ್ಯುವೆಂಬ ವ್ಯಾಧನು ತನ್ನ ಬಲೆಯನ್ನು ಹರಡಿ ತಮ್ಮನ್ನು ಹಿಡಿಯಲು ಕಾದಿದ್ದಾನೆಂದು ಅವರು ತಿಳಿಯುವುದಿಲ್ಲ. ಅವಿದ್ಯೆ ಕಾಮ್ಯಕರ್ಮ ಮುಂತಾದವುಗಳೇ ವ್ಯಾಧನಂತಿವೆ. ಅವುಗಳ ಕ್ಲೇಶಗಳೆಂಬ ಉರುಳಿಗೆ ಸಿಕ್ಕಿಬಿದ್ದಿರುವ ಜೀವನು ಇಂದ್ರಿಯ-ಗಳು ಎಳೆದ ಕಡೆಗೆ ಹೋದರೆ ಆ ಉರುಳಿನಿಂದ ಎಂದೂ ಬಿಡಿಸಿಕೊಳ್ಳಲಾರನು ಆದುದರಿಂದ ವಿವೇಕಿಗಳು ಮೋಕ್ಷವೊಂದೇ ಶಾಶ್ವತವಾದುದು. ಹಣ, ಮನೆ, ಮಕ್ಕಳು ಹೆಂಡತಿ ಮುಂತಾದವೆಲ್ಲವೂ ಅಶಾಶ್ವತವೆಂದು ತಿಳಿದು ನಶ್ವರವಾದ ವಿಷಯ-ಗಳನ್ನು ಬಯಸುವುದಿಲ್ಲ, ಅವುಗಳನ್ನು ಪಡೆಯಲು ಪ್ರಯತ್ನಿಸುವುದಿಲ್ಲ.

ಪ್ರಶ್ನೆ :- ಹಾಗಾದರೆ ವಯಸ್ಸಿನಲ್ಲಿ ಬಾಲಕನಾದರೂ, ವಿವೇಕಿಯಾದ ನಚಿಕೇತನು ಇಂತಹ ಧೀರರಲ್ಲಿ, ಜ್ಞಾನಿಗಳಲ್ಲಿ ಒಬ್ಬನೆಂದು ಹೇಳಬಹುದಲ್ಲವೆ ?

ಉತ್ತರ :- ಹೌದು ಸಂದೇಹವಿಲ್ಲ, ವಯಸ್ಸು ಮುಖ್ಯವಲ್ಲ ಜ್ಞಾನವೇ ಮುಖ್ಯ. ॥ 2 ॥

ಯಮದೇವನು ತನ್ನನ್ನು ಬಳಸಿ ಹೊಗಳುವುದನ್ನು ಸೂಕ್ಷ್ಮಮತಿಯಾದ ನಚಿಕೇತನು ತಿಳಿದನು. ಹೊಗಳಿಕೆಯೆಂದರೆ ಬ್ರಹ್ಮಜಿಜ್ಞಾಸುವಿಗೆ ಕಹಿಮಾತ್ರೆ. ಬ್ರಹ್ಮಜ್ಞಾನವನ್ನು ಬಯಸುವವನು ಹೊಗಳಿಕೆಯಿಂದ ದೂರವಿರಬೇಕು. ಆದುದರಿಂದ ನಚಿಕೇತನು ನೇರವಾಗಿ ವಿಷಯದ ಕಡೆಗೆ ಹೋಗಬೇಕೆಂದು ಬಯಸಿದನು.

ನಚಿಕೇತನು ಪ್ರಶ್ನಿಸುತ್ತಾನೆ.

**ನಚಿಕೇತಾ ಅರ್ಥಾತ್‌ಪ್ರಾಪ್ತಮಾತ್ಮನಃ ಸ್ತುತಿಂ ಮತ್ವಾ ಅಲಂ ಸ್ತುತ್ಯಾ ಕ್ಷಿಪ್ರಂ ತತ್ತ್ವಂ ವದೇತಿ ಭಾವೇನ ಪೃಚ್ಛತಿ- ಯೇನೇತಿ ।**

**ಯೇನ ರೂಪಂ ರಸಂ ಗಂಧಂ ಶಬ್ದಾನ್ ಸ್ಪರ್ಶಾಂಶ್ಚ ಮೈಥುನಾನ್ ।**
**ಏತೇನೈವ ವಿಜಾನಾತಿ ಕಿಮತ್ರ ಪರಿಶಿಷ್ಯತೇ ॥ ಏತದ್ವೈ ತತ್ ॥ 3 ॥**

**ಯೇನ ಏತೇನೈವ ಬ್ರಹ್ಮಣಾ ಪ್ರೇರಿತಾ ರೂಪಾದೀನ್ ವಿಜಾನಾತಿ ತದೇತತ್ ಜೀವಪ್ರೇರಕಂ ಬ್ರಹ್ಮಾತ್ರ ಮೋಕ್ಷೇ ಪರಿಶಿಷ್ಯತೇ ಮುಕ್ತಜೀವಪ್ರೇರಕತ್ವೇನ ಆಸ್ತೇ ಕಿಮಿತಿ ಪ್ರಶ್ನಾರ್ಥಃ । ಇತಿ ಪೃಷ್ಟೋ ಯಮಃ ಪ್ರತ್ಯುತ್ತರಮಾಹ ಏತದ್ವೈ ತದಿತಿ । ಏತತ್ ತ್ವಯಾ ಪರಿಶಿಷ್ಯತೇ ಕಿಮಿತಿ ಪೃಷ್ಟಂ ಏತದ್ವೈ ಏತದ್ಗುಣಕಂ ಸತ್ ಪರಿಶಿಷ್ಯತೇ ವೈ ಅಸಂಶಯಮಿತ್ಯರ್ಥೇ ವೈನಿಪಾತಃ । ಪರಿಶಿಷ್ಯತ ಇತ್ಯೇತದತ್ರಾಪ್ಯನ್ವೇತಿ ॥ 3 ॥**

ಯಮಧರ್ಮರಾಜನೆ ! ಈ ಸಂಸಾರಾವಸ್ಥೆಯಲ್ಲಿ ಜೀವನು ಬಗೆಬಗೆಯ ಬಣ್ಣಗಳನ್ನು ನೋಡಿ ಆನಂದಿಸುತ್ತಾನೆ. ನಾಲಿಗೆಯಿಂದ ನಾನಾ ರಸಗಳನ್ನು ಸವಿದು ನಲಿಯುತ್ತಾನೆ. ಮೂಗಿನಿಂದ ವಾಸನೆಗಳನ್ನು ಅನುಭವಿಸುತ್ತಾನೆ. ಕಿವಿಯಿಂದ ಶಬ್ದಗಳನ್ನು ಕೇಳುತ್ತಾನೆ. ಮತ್ತೊಂದು ಇಂದ್ರಿಯದಿಂದ ಕಾಮಸುಖವನ್ನು ಅನುಭವಿಸುತ್ತಾನೆ. ಈ ಅನುಭವಗಳೆಲ್ಲವೂ ಜೀವನಿಗೆ ಪ್ರೇರಕನಾದ ಜೀವನಿಗಿಂತ ಬೇರೆಯಾದ ಒಂದು ಪರಮ ಶಕ್ತಿಯಿಂದ ಅಂದರೆ ಪರಬ್ರಹ್ಮನಿಂದ ನಡೆಯುತ್ತವೆಯೆಂದು ನಾವು ಶಾಸ್ತ್ರಗಳಿಂದಲೂ ಯುಕ್ತಿಸಹಿತವಾದ ಅನುಭವದಿಂದಲೂ ನಿಶ್ಚಯಿಸುತ್ತೇವೆ. ಸಂಸಾರದಲ್ಲಿ ನಮ್ಮನ್ನು ಪ್ರೇರಿಸುವ ಆ ಪರಮಶಕ್ತಿಯು ನಮಗಿಂತ ಭಿನ್ನವಾಗಿದೆಯೆಂದು ಅನುಭವಿಸಿದ್ದ; ಆದರೆ ಮೋಕ್ಷದಲ್ಲಿ ಆ ಪರಬ್ರಹ್ಮಶಕ್ತಿಯು ನಮಗಿಂತ ಬೇರೆಯಾಗಿ ನಮ್ಮನ್ನು ಪ್ರೇರಿಸುತ್ತಾ ಇರುತ್ತದೆಯೇ ಇಲ್ಲವೆ ? ಇದನ್ನು ತಿಳಿಯಲೆಂದೇ ನಾನು ನಿಮ್ಮನ್ನು ಕುರಿತು ಮೂರನೆಯ ವರವನ್ನು ಬೇಡಿದ್ದೇನೆ. ''ಅದನ್ನು ತಿಳಿಸು''.

ನಚಿಕೇತನ ಈ ವಿವರವಾದ ಪ್ರಶ್ನೆಗೆ ಯಮಧರ್ಮನ ಸಂಕ್ಷಿಪ್ತ ಉತ್ತರ ಹೊರ ಬಂತು.

''ಹೌದು. ನೀನು ಕೇಳಿದಂತಹ ಗುಣವುಳ್ಳ ಪರಬ್ರಹ್ಮವು ಮೋಕ್ಷದಲ್ಲಿಯೂ ಪ್ರೇರಕವಾಗಿ ಇದ್ದೇ ಇರುತ್ತದೆ. ಕಣ್ಣಿನಿಂದ ನೋಡಿಸುತ್ತಾ, ನಾಲಿಗೆಯಿಂದ ರುಚಿ ನೋಡಿಸುತ್ತಾ, ಮೂಗಿನಿಂದ ವಾಸನೆಯ ಅನುಭವವನ್ನುಂಟುಮಾಡಿಸುತ್ತಾ ಹೀಗೆ ಮತ್ತಿತರ ಜೀವನ ಸ್ವರೂಪಾತ್ಮಕವಾದ ಶುಭ-ಮಂಗಳ ಇಂದ್ರಿಯಗಳಿಂದ ಪರಬ್ರಹ್ಮವು ಮುಕ್ತಿಯಲ್ಲಿ ತನಗಿಂತ ಭಿನ್ನವಾದ ಜೀವವನ್ನು ಪ್ರೇರಿಸುತ್ತಾ ಇರುತ್ತದೆ, ಇದರಲ್ಲಿ ಸಂಶಯವಿಲ್ಲ ॥ 3 ॥

ನಚಿಕೇತನು :- ಗುರುದೇವ ! ಪ್ರಶ್ನೆಗಿಂತ ಉತ್ತರವು ಸಂಕ್ಷಿಪ್ತವಾಯಿತಲ್ಲವೇ ? ಬಂಧನದಿಂದ ಬಿಡುಗಡೆ ಹೊಂದಿದ ಜೀವನನ್ನು ಮುಕ್ತಿಯಲ್ಲಿಯೂ ಎಡಬಿಡದ ಒಡೆಯನ ಸ್ವರೂಪವನ್ನು ಚೆನ್ನಾಗಿ ವಿವರಿಸಿ ಹೇಳುವ ಕೃಪೆಯಾಗಬೇಕು.

**★ ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ ।**
**ಯಥಾ ಮರಣಂ ಪ್ರಾಪ್ಯಾತ್ಮಾ ಭವತಿ ಗೌತಮ ॥**

(ಎರಡನೆ ಅಧ್ಯಾಯ 2 ವಲ್ಲಿ ಆರನೇ ಮಂತ್ರ)

ಯಮ:- ಕುಮಾರ ! ಬಹಳ ಸಂತೋಷವಾಯಿತು. ಶಿಷ್ಯನ ಜಿಜ್ಞಾಸೆಗೆ ತಕ್ಕಂತೆ ಉತ್ತರ ಬರುತ್ತದೆ. ಅತ್ಯಂತ ರಹಸ್ಯವಾದ, ಯಾವಾಗಲೂ ಒಂದೇ ರೀತಿಯಲ್ಲಿರುವ ಆ ಪರಬ್ರಹ್ಮನನ್ನು ವೇದಗಳಿಂದ ಗುರುಗಳ ಮೂಲಕ ತಿಳಿಯಬೇಕು. ನಿನಗೆ ನಾನು ಅದನ್ನೀಗ ಹೇಳುತ್ತೇನೆ. ಎಲೈ ಗೌತಮನೆ, ಜೀವನು ಜ್ಞಾನವನ್ನು ಪಡೆದು ಕೊನೆಯ ಮರಣವನ್ನು ಹೊಂದಿದ ಮೇಲೆ ಏನಾಗುತ್ತಾನೆ ? ಹೇಗೆ ಆಗುತ್ತಾನೆ ? ಎಂಬ ವಿಷಯವನ್ನು ಹೇಳುತ್ತೇನೆ. ಅದನ್ನು ಕೇಳಿದ ಮೇಲೆ ನಿನಗೆ ಜೀವೇಶ್ವರರ ಭೇದದ ವಿಷಯದಲ್ಲಿ ಸಂಶಯವು ಉಳಿಯುವುದಿಲ್ಲ.

---

★ ಈ ಮಂತ್ರವು ಮುಂದೆ ಇದ್ದರೂ ಭಾಷ್ಯದಲ್ಲಿ ಮೊದಲೇ ವ್ಯಾಖ್ಯಾನ ಮಾಡಿದ್ದಾರೆ.

ಮುಕ್ತೌ ನಿಯಾಮಕಂ ಬ್ರಹ್ಮಸ್ವರೂಪಂ ವಿಸ್ತರೇಣ ಬ್ರೂಹೀತಿ ಪೃಷ್ಟೋ ಯಮೋ ವಿಸ್ತರೇಣಾಹ ಸ್ವಪ್ನಾಂತಮಿತಿ ॥

**ಸ್ವಪ್ನಾಂತಂ ಜಾಗರಿತಾಂತಂ ಚೋಭೌ ಯೇನಾನುಪಶ್ಯತಿ ।**
**ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ 4 ॥**

"ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ । ಯಥಾ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ" ಇತಿ ಉತ್ತರಾಧ್ಯಾಯಗತಂ ಪ್ರತಿಜ್ಞಾವಾಕ್ಯಂ ಅತ್ರಾದೌ ಯೋಜ್ಯಮಿತಿ ವದಂತಿ । ಭಾಷ್ಯೇ ಅತ್ರೈವ ವ್ಯಾಖ್ಯಾನಾತ್ । ಪೂರ್ವಾರ್ಧಃ ಸ್ಪಷ್ಟಾರ್ಥಃ । ಉತ್ತರಾರ್ಧಸ್ಯ ತು ಆತ್ಮಾ ಜೀವಃ ಮರಣಂ ಪ್ರಾಪ್ಯ ಯಥಾ ಭವತಿ ತಚ್ಚ ಪ್ರವಕ್ಷ್ಯಾಮಿ । ಜೀವೇಶಭೇದಜ್ಞಾಪನಾಯೇತ್ಯರ್ಥಃ । ಸ್ವಪ್ನಾಂತಂ ಸುಷುಪ್ತಿಂ, ಜಾಗರಿತಾಂತಂ ಸ್ವಪ್ನಂ ಚೋಭೌ ಸುಷುಪ್ತಿಸ್ವಪ್ನೌ ಯೇನ ಪ್ರೇರಿತೋ ಜೀವಃ ಪಶ್ಯತಿ ತಂ ಮಹಾಂತಮಿತ್ಯನ್ವಯಃ ॥ 4 ॥

ನಚಿಕೇತನೇ ! ಜೀವನಿಗೆ ಈ ಸಂಸಾರಾವಸ್ಥೆಯಲ್ಲಿ 'ಸುಷುಪ್ತಿ' ಅಂದರೆ ನಿದ್ದೆ ಮತ್ತು ಸ್ವಪ್ನ ಇವೆರಡೂ ಉಂಟಾಗುತ್ತವೆಯಷ್ಟೇ ? ಇವುಗಳನ್ನು ಅವನು ಇಷ್ಟಪಟ್ಟಾಗ ಸಂಪಾದಿಸಿಕೊಳ್ಳಬಲ್ಲನೇ ? ಇಂದು ಇಷ್ಟುಹೊತ್ತಿಗೆ ನಿದ್ದೆ ಬರಬೇಕು. ಇಷ್ಟೇ ಹೊತ್ತಿಗೆ ಎಚ್ಚರವಾಗಬೇಕು. ಇಂದು ಸ್ವಪ್ನ ಬೀಳಲೇಬಾರದು. ಅಥವಾ ಇಂತಹ ಸ್ವಪ್ನ ಬೀಳಲೇಬೇಕು ಎಂದು ಕಡ್ಡಾಯವಾಗಿ ನಾವು ನಮ್ಮ ಮೇಲೆ ನಿರ್ಬಂಧ ಹಾಕಿಕೊಳ್ಳಬಲ್ಲವೇ ? ಎಂದಿಗೂ ಇಲ್ಲ. ಇವುಗಳನ್ನೆಲ್ಲ ತಯಾರು ಮಾಡಿ ನೋಡಿಸುವವನು ಒಬ್ಬನಿದ್ದಾನೆ ಎಂಬುದು ಅನುಭವಿಸಿದ್ದವಷ್ಟೆ ? ಇಂತಹವನು ಜೀವನಿಗಿಂತ ಎಷ್ಟೋಪಾಲು ದೊಡ್ಡವನು; ಮಹಾಮಹಿಮನು. ಬ್ರಹ್ಮಾಂಡದ ಹೊರಗೂ ಒಳಗೂ ವ್ಯಾಪ್ತನು ಎಲ್ಲರಿಗೂ ಪ್ರೇರಕನಾದ ಸ್ವಾಮಿಯು, ಜ್ಞಾನಿಯಾದ ಜೀವನು ಇಂತಹ ಪರಮಾತ್ಮನನ್ನು ಮುಕ್ತಿಯಲ್ಲಿಯೂ, ಮೊದಲು ಸಂಸಾರದಲ್ಲಿಯೇ ಚೆನ್ನಾಗಿ ತಿಳಿದಂತೆಯೇ ನೋಡುತ್ತಾ ಇರುತ್ತಾನೆ. ಇಂತಹವನ ದರ್ಶನವು ಅವನಿಗೆ ಯಾವಾಗಲೂ ಆಗುತ್ತಿರುವುದರಿಂದ ಅವನಿಗೆ ಯಾವ ಶೋಕವೂ ಇರುವುದಿಲ್ಲ ತಿಳಿಯಿತೇ ?

**ಯ ಇದಂ ಮಧ್ವದಂ ವೇದಾತ್ಮಾನಂ ಜೀವಮಂತಿಕಾತ್ ।**
**ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ಏತದ್ವೈ ತತ್ ॥ 5 ॥**

ಯೋಽಧಿಕಾರೀ ಇದಂ ಇಮಂ ಮಧ್ವದಂ ಮಧು ಸುಖಂ ಅತ್ತೀತಿ ಮಧ್ವದಃ ತಂ ಅತ್ತೇರಚ್ ಪ್ರತ್ಯಯಃ, ದೇಹೇ ಸ್ಥಿತ್ವಾ ಸಾರಭೋಕ್ತಾರಮಿತಿ ಯಾವತ್, ಜೀವಮಂತಿಕಾತ್ ಜೀವಸಮೀಪೇ ತನ್ನಿಯಾಮಕತಯಾ ಸ್ಥಿತಂ ಆತ್ಮಾನಂ ಭೂತಭವ್ಯಸ್ಯ, ದ್ವಂದ್ವೈಕವದ್ಭಾವಃ, ಭೂತಭಾವಿನೋರೀಶಾನಂ ಪ್ರೇರಕಂ ವೇದ ಜಾನಾತಿ ಸ ತತಃ ಆತ್ಮನೋ ನಿಯಾಮಕತಯಾ ಜ್ಞಾತತ್ವಾತ್ ನ ವಿಜುಗುಪ್ಸತೇ, ಗುಪೂ ರಕ್ಷಣೇ, ಆತ್ಮಾನಂ ಗೋಪ್ತುಂ ರಕ್ಷಿತುಂ ನೇಚ್ಛತಿ । ಭಗವಾನೇವ ಸದಾ ಸರ್ವತ್ರ ರಕ್ಷಕತಯಾಽಽಸ್ತ ಇತಿ

**ಜ್ಞಾತ್ವಾ ಸ್ವಾತ್ಮರಕ್ಷಣಾರ್ಥಂ ನ ಪ್ರಯತತ ಇತ್ಯರ್ಥಃ । ಏತದ್ವೈತತ್ ಯತ್ ತ್ವಯಾ ಪೃಷ್ಟಂ ತತ್ ಏತದ್ವೈ ಪ್ರಾಗುಕ್ತ- ಗುಣಕಂ ವೈ ॥ 5 ॥**

ಇಹಲೋಕದಲ್ಲಿ ಅಧಿಕಾರಿಯು ಒಳ್ಳೆಯ ಭಾವನೆಯನ್ನು (ಅನುಸಂಧಾನ) ಯಾವಾಗಲೂ ಆವರ್ತಿಸುತ್ತಿರಬೇಕು. ''ಪರಬ್ರಹ್ಮವು ಜೀವನ ದೇಹದಲ್ಲಿ ಅವನನ್ನು ನಡೆಸುತ್ತಾ, ಜೀವನ ಕರ್ಮದಿಂದ ಉಂಟಾದ ಆನಂದದಲ್ಲಿ ಸಾರವಾದ ಭಾಗವನ್ನು ಅನುಭವಿಸುತ್ತಾ ಇರುತ್ತದೆ. ಅದು ಜೀವನನ್ನು ಬಿಟ್ಟು ಎಂದೂ ಇರುವುದಿಲ್ಲ. ಅವನ ಹತ್ತಿರದಲ್ಲಿಯೇ ಸಾರಥಿಯು ರಥವನ್ನೂ, ರಥಿಕನನ್ನೂ ನಡೆಸುವಂತೆ ಜೀವನನ್ನೂ ಅವನ ರಥವನ್ನೂ (ದೇಹವನ್ನು) ನಡೆಸುತ್ತಾ ಇರುತ್ತದೆ. ಈ ಪರಬ್ರಹ್ಮವು ಹಿಂದೆ ಆಗಿಹೋದ, ಮುಂದೆ ಬರಲಿರುವ ಎಲ್ಲ ಜಡ ಚೇತನಗಳನ್ನು ನಡೆಸುತ್ತದೆ.

ಈ ರೀತಿಯಾಗಿ ಪರಮಾತ್ಮನೇ ತನ್ನನ್ನು ಯಾವಾಗಲೂ ಎಲ್ಲೆಡೆಯಲ್ಲಿಯೂ ನಡೆಸುತ್ತಾನೆ, ರಕ್ಷಿಸುತ್ತಾನೆ ಎಂಬ ಜ್ಞಾನವುಳ್ಳವನಿಗೆ ಯಾತರ ಭಯವಿದೆ ? ತಾಯಿಯ ಮಡಿಲಿನಲ್ಲಿರುವ ಮಗುವಿಗೆ ಯಾವ ಆತಂಕವೂ ಇಲ್ಲವಲ್ಲವೆ ? ಈ ರೀತಿಯ ನಿರಂತರ ಭಾವನೆಯುಳ್ಳವನು ಇಹಲೋಕದಲ್ಲಿಯೂ ತನ್ನನ್ನು ತಾನು ಕಾಪಾಡಿಕೊಳ್ಳಲು ಬಯಸುವುದಿಲ್ಲ. ಇದೇ ರೀತಿಯಲ್ಲಿ ಮುಕ್ತಿಯಲ್ಲಿ ಪರಮಾತ್ಮನೇ ಅವನಿಗೆ ರಕ್ಷಕನಾಗಿರುತ್ತಾನೆ. ಮುಕ್ತಿಯಲ್ಲಿರುವ ಪರಮಾತ್ಮನ ಸ್ವರೂಪವೇನೆಂದು ನೀನು ಕೇಳಿದಿಯಷ್ಟೇ ? ಇಗೋ ಮೇಲೆ ಹೇಳಿದ ಗುಣಗಳಿಂದ ಕೂಡಿದ ಪರಮಾತ್ಮನೇ ಮುಕ್ತಿಯಲ್ಲಿ ಜೀವಕೋಟಿಯನ್ನು ನಡೆಸುತ್ತಾ ಇರುತ್ತಾನೆ. ॥ 5 ॥

ನಚಿಕೇತನೆ, ನೀನು ಕೇಳಿದ ಪರಮಾತ್ಮನ ಮಹಿಮೆಗಳು ಅನಂತ, ಅವುಗಳಲ್ಲಿ ಕೆಲವನ್ನು ಇನ್ನೂ ಹೇಳುತ್ತೇನೆ. ಕೇಳು :-

**ಪುನರ್ಭಗವತೋ ಮಹಿಮೋಕ್ತಪೂರ್ವಕಂ ತ್ವತ್‌ಪೃಷ್ಟಮೇವಂರೂಪಮಿತಿ ಬಹುಭಿರ್ಮಂತ್ರೈಃ ಆಹ - ಯ ಇತಿ ॥**

**ಯಃ ಪೂರ್ವಂ ತಪಸೋಽಜಾತಮ್**
**ಅದ್ಭ್ಯಃ ಪೂರ್ವಮಜಾಯತ ।**
**ಗುಹಾಂ ಪ್ರವಿಶ್ಯ ತಿಷ್ಠಂತಂ**
**ಯೋ ಭೂತೇಭಿರ್ವ್ಯಪಶ್ಯತಿ । ಏತದ್ವೈ ತತ್ ॥ 6 ॥**

**ಯೋ ಭಗವಾನ್ ಅಜಾತಂ ಪೂರ್ವಮಜಾತಂ ಚತುರ್ಮುಖಂ ತಪಸಃ ತಪೋನಾಮಕಾ- ಚ್ಛಿವಾತ್ ಪೂರ್ವಮ್ ಅದ್ಭ್ಯಃ ಅಮ್ನಾಮಕೇಭ್ಯೋ ಭೂತೇಭ್ಯಶ್ಚ ಪೂರ್ವಮಜಾಯತ ಅಜನಯತ್, ಅಂತರ್ನೀತಣಿಚ್, ಯೋ ಭಗವಾನ್ ಗುಹಾಂ ಹೃದಯಗುಹಾಂ ಪ್ರವಿಶ್ಯ ತಿಷ್ಠಂತಂ ಸ್ವಾತ್ಮಾನಂ ಭೂತೇಭಿಃ ಭೂತೈಸ್ಸಹ ವ್ಯಪಶ್ಯತಿ ವಿಶೇಷೇಣ ಪಶ್ಯತಿ, ಅಡಾಗಮಃ ಛಾಂದಸಃ । ಏತದ್ವೈ ತತ್ । ಯತ್ ತ್ವಯಾ ಪೃಷ್ಟಂ ತತ್ ಏತದ್ವೈ ಉಕ್ತಗುಣಕಂ ವೈ । ಅಜಾತಮಿತಿ ವಿಶೇಷಣಂ ತು ಭಗವನ್‌ಮುಖಾದ್ಯವ-**

**ಯವತೋ ಜಾತಾ ಏವೇಂದ್ರಾದಯಃ ಕಶ್ಯಪಾತ್ ಪುನರ್ಜಾಯಂತೇ, ನ ತಥಾ ಭಗವತೋ ಬ್ರಹ್ಮಾ, ಕಿಂತು ಪೂರ್ವಮಜಾತ ಏವ ಭಗವತೋ ಜಾತ ಇತಿ ವಕ್ತುಮ್ ॥ 6 ॥**

ಷಡ್ಗುಣಭರಿತನು ಪರಮಾತ್ಮನು. ಅವನು ತಪಸ್ ಎಂಬ ಹೆಸರುಳ್ಳ ಶಿವನನ್ನು ಸೃಷ್ಟಿಸುವುದಕ್ಕಿಂತಲೂ ಮೊದಲು 'ಅಪ್' ಎಂಬ ಹೆಸರುಳ್ಳ ಭೂತಗಳಿಗಿಂತಲೂ ಮೊದಲು 'ಅಜ' ಅಥವಾ 'ಅಜಾತ' ಎಂಬ ಹೆಸರುಳ್ಳ ಬ್ರಹ್ಮನನ್ನು ಸೃಷ್ಟಿಸಿದನು. ಇಂದ್ರಾದಿದೇವತೆಗಳು ಪರಮಾತ್ಮನ ಮುಖ ಮುಂತಾದ ಅವಯವಗಳಿಂದ ಒಂದು ಬಾರಿ ಹುಟ್ಟಿದವರೇ ಪುನಃ ಕಶ್ಯಪನಿಂದ ಹುಟ್ಟುತ್ತಾರೆ. ಬ್ರಹ್ಮನು ಹಾಗಲ್ಲ ಪರಮಾತ್ಮನಿಂದಲೇ ಮೊದಲನೆ ಬಾರಿಗೆ ಹುಟ್ಟುತ್ತಾನೆ. ಆದುದರಿಂದಲೇ ಬ್ರಹ್ಮನಿಗೆ 'ಅಜಾತ' ಎಂದು ಹೆಸರು. ಹೀಗೆ ಬ್ರಹ್ಮನನ್ನು ಸೃಷ್ಟಿಸಿದ ನಾರಾಯಣನು ಭೂತಗಳನ್ನೂ ಸೃಷ್ಟಿಸಿ ಅವುಗಳ ಹೃದಯಗುಹೆಯನ್ನು ಪ್ರವೇಶಿಸಿ, ತನ್ನನ್ನೂ ಆ ಜೀವರನ್ನೂ ಯಾವಾಗಲೂ ವಿಶೇಷ ರೀತಿಯಿಂದ ನೋಡುತ್ತಾ ಇರುತ್ತಾನೆ. ನೀನು ಕೇಳಿದ ಪರಬ್ರಹ್ಮವು ಇಂತಹ ಅನೇಕ ಗುಣಗಳಿಂದ ಕೂಡಿದೆ ಎಂದು ನಿಶ್ಚಯವಾಗಿ ತಿಳಿ ॥ 6 ॥

**ಯಾ ಪ್ರಾಣೇನ ಸಂವಿಶತ್ಯದಿತಿರ್ದೇವತಾಮಯಿ ।**
**ಗುಹಾಂ ಪ್ರವಿಶ್ಯ ತಿಷ್ಠಂತೀಂ**
**ಯಾ ಭೂತೇಭಿರ್ವ್ಯಜಾಯತ । ಏತದ್ವೈ ತತ್ ॥ 7 ॥**

**ಯಾ ಪ್ರಾಣೇನೇತಿ । ಅದನಾತ್ ಸರ್ವಜಗದ್ಭಕ್ಷಣಾತ್ ಅದಿತಿನಾಮ್ನೀ ದೇವತಾಮಯೀ ಸರ್ವದೇವೋತ್ತಮಾ, ಮಯಟ್ ಪ್ರಾಧಾನ್ಯಾರ್ಥೇ, ಯಾ ಭಗವತ್ತನುಃ ಪ್ರಾಣೇನ ಮುಖ್ಯವಾಯುನಾ ಸಹ ಸಂವಿಶತಿ ತಿಷ್ಠತಿ, ಯಾ ಚ ಭಗವತ್ತನುಃ ಗುಹಾಂ ಪ್ರವಿಶ್ಯ ತಿಷ್ಠಂತೀಂ ಸ್ವಕೀಯಾಮೇವ ತನುಂ ಭೂತೇಭಿಃ ಭೂತೈಃ ಪ್ರಾಣಿಭಿಸ್ಸಹ ವ್ಯಜಾಯತ ವಿವಿಧತಯಾ ಜನಯಾಮಾಸ, ಅಂತರ್ಣೀತಣಿಚ್ । ಮತ್ಸ್ಯಾದಿನಾನಾರೂಪತಯಾ ಸ್ವಾತ್ಮಾನಂ ಪ್ರಾದುರ್ಭಾವಯಾಮಾಸ, ಪ್ರಾಣಿನಶ್ಚ ದೇಹಯೋಗೇನ ನಾನಾವಿಧಾನುತ್ಪಾದಯಾಮಾಸೇತಿ ಯಾವತ್ । ಏತದ್ವೈ ತತ್ । ತ್ವಯಾ ಪೃಷ್ಟಂ ಯತ್ ತತ್ ಏತದ್ವೈ ಇತಿ ॥ 7 ॥**

ಈ ಪರಬ್ರಹ್ಮನ ಗುಣಗಳನ್ನು ಇನ್ನೂ ಹೇಳುತ್ತೇನೆ ಕೇಳು. ಅವನು ಸರ್ವ ಜಗತ್ತನ್ನೂ ಸಂಹರಿಸುತ್ತಾನೆ. (ಭಕ್ಷಿಸುತ್ತಾನೆ). ಆದುದರಿಂದ ಅವನಿಗೆ 'ಅದಿತಿ' ಎಂದು ಹೆಸರು. ಅವನು ಸರ್ವದೇವತೆಗಳಲ್ಲಿಯೂ ಪ್ರಧಾನನು. ಆದುದರಿಂದ ಸರ್ವೋತ್ತಮನು. 'ಪ್ರಕಾಶಮಯ' ಎಂಬ ಹೆಸರು ಸೂರ್ಯನಿಗಿರುವಂತೆ ಸರ್ವದೇವೋತ್ತಮನಾದುದರಿಂದಲೇ ಅವನಿಗೆ ದೇವತಾಮಯೀ ಎಂದು ಹೆಸರು. ಇಂತಹ ಪರಮಾತ್ಮನು ಮುಖ್ಯ ಪ್ರಾಣನಲ್ಲಿ ಅಂತರ್ಯಾಮಿಯಾಗಿದ್ದು ಎಲ್ಲರ ಹೃದಯಗುಹೆಯಲ್ಲಿರುತ್ತಾನೆ. ಒಂದೊಂದು ಪ್ರಾಣಿಯ ಹೃದಯಗುಹೆಯಲ್ಲಿ ಒಂದೊಂದು ಜೀವಸ್ವರೂಪವಿರುವಂತೆ, ಪರಮಾತ್ಮನು ತನ್ನ ರೂಪವನ್ನೂ ಎಲ್ಲಾ ಜೀವರಲ್ಲಿ ನಿಯಾಮಕವಾಗಿರುವಂತೆ ಪ್ರಕಟಗೊಳಿಸುತ್ತಾನೆ. ಈ ಜೀವ-ನಿಯಾಮಕನಾದ ಬ್ರಹ್ಮರೂಪಿಯಾದ ಪರಮಾತ್ಮನೇ ಹೊರಗೆ ತನ್ನ ಮತ್ಸ್ಯಾದಿರೂಪಗಳನ್ನೂ ಪ್ರಕಟಗೊಳಿಸುತ್ತಾನೆ. ಹೀಗೆ ಜೀವರಿಗೆ ದೇಹಗಳನ್ನು ಕೊಟ್ಟು ಅವರನ್ನು ಸೃಷ್ಟಿಸಿ, ಅವರಲ್ಲಿ ತಾನೂ ನಿಯಾಮಕರೂಪದಿಂದ ಒಳಗೆ ಪ್ರಕಟನಾಗಿ, ಹೊರಗೂ ಅನೇಕರೂಪಗಳಿಂದ ಅವನು ವಿರಾಜಿಸುತ್ತಿದ್ದಾನೆ. ನೀನು ಕೇಳಿದಂತಹ ಪರಬ್ರಹ್ಮವು ಇದೇ ಎಂದು ತಿಳಿ ॥ 7 ॥

ಅರಣ್ಯೋರ್ನಿಹಿತೋ ಜಾತವೇದಾ
ಗರ್ಭ ಇವ ಸುಭೃತೋ ಗರ್ಭಿಣೀಭಿಃ ।
ದಿವೇ ದಿವ ಈಡ್ಯೋ ಜಾಗೃವದ್ಭಿ-
ರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥ 8 ॥

ಅರಣ್ಯೋರಿತಿ । ಋ ಗತಾವಿತ್ಯತಃ ಕರ್ಮಣ್ಯಕಾರೇ ಗುಣೇ ಚ ಅರೇತಿ ರೂಪಮ್ । ಅರಃ ಜ್ಞಾಯಮಾನಃ ಣಃ ಸುಖರೂಪೋ ಹರಿಃ ಯಾಭ್ಯಾಂ ಗುರುಶಿಷ್ಯಾಭ್ಯಾಂ ತೌ ಗುರುಶಿಷ್ಯಾವರಣೀ । ಸಮಾಸಾಂತ ಇಕಾರಃ । ಅರಣ್ಯೋಃ ಗುರುಶಿಷ್ಯಯೋಃ, ಜಾತವೇದಾಃ ಜಾತಂ ಸರ್ವಂ ವೇತ್ತೀತಿ ಜಾತವೇದಾಃ, ಜಾತಮಿತ್ಯುಪಲಕ್ಷಣಂ, ಸರ್ವಜ್ಞೋ ಹರಿಃ ನಿಹಿತಃ ನಿತರಾಂ ಸ್ಥಿತಃ । ಕ ಇವ ? ಗರ್ಭಿಣೀಭಿಃ ಸ್ತ್ರೀಭಿಃ ಸುಭೃತಃ ಸಮ್ಯಕ್ ಧೃತಃ ಗರ್ಭ ಇವ, ಅಗ್ನಿಃ ಅರಣ್ಯೋಃ ಗುರುಶಿಷ್ಯಯೋಃ ನಿಹಿತಃ ಅದನಾದಗ್ನಿನಾಮಾ ಹರಿಃ ಜಾಗೃವದ್ಭಿಃ ಭಗವಜ್ಜ್ಞಾನವದ್ಭಿಃ, ನ ಹಿ ಜ್ಞಾನಾದಿತೋ ಅನ್ಯಜ್ಜಾಗರಣಮಸ್ತಿ, 'ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ' ಇತ್ಯಾದೇಃ, ಹವಿಷ್ಮದ್ಭಿಃ ಯಜ್ಞಸಾಧನ-ವದ್ಭಿಃ ಮನುಷ್ಯೇಭಿಃ ಮನುಷ್ಯೈಃ ದಿವೇ ದಿವೇ ಪ್ರತಿದಿನಂ ಈಡ್ಯಃ ಸ್ತುತ್ಯೋ ವರ್ತತೇ ॥ 8 ॥

ಬನ್ನಿಮರದ ''ಅರಣಿ'' ಎಂಬ ಹೆಸರಿನ ಎರಡು ಕಟ್ಟಿಗೆಯಲ್ಲಿ ಗರ್ಭಿಣಿಯ ಗರ್ಭದಲ್ಲಿ ಶಿಶುವು ಇರುವಂತೆ ಅಗ್ನಿಯು ಗೂಢವಾಗಿ ಇರುತ್ತದೆ. ಅದನ್ನು ಮಥಿಸಿ ಪ್ರಕಟಪಡಿಸಿ, ಪೂಜಾಸಾಮಗ್ರಿಗಳಿಂದ ಜ್ಞಾನಿಗಳಾದ ಮನುಷ್ಯರು ಎಚ್ಚರಿಕೆಯಿಂದ ಪೂಜಿಸುತ್ತಾರೆ.

ಅದರಂತೆಯೆ ನಾವು ಗುರು ಶಿಷ್ಯರನ್ನು ಸುಖರೂಪಿಯಾದ 'ಣ' ಎಂಬ ಹೆಸರಿನ ಪರಮಾತ್ಮನನ್ನು ತಿಳಿಯುವ ಕಾರಣದಿಂದ ಅರಣಿಗಳು ಎಂದು ತಿಳಿಯಬೇಕು.★ ಸರ್ವಜ್ಞನಾದುದರಿಂದ 'ಜಾತವೇದಾಃ' ಎಂದು ಪರಮಾತ್ಮನಿಗೆ ಹೆಸರು. ಅವನು ಹಿಂದೆ ಹೇಳಿದ ಗುರುಶಿಷ್ಯರಲ್ಲಿ ಗೂಢನಾಗಿರುತ್ತಾನೆ. ಗರ್ಭಿಣಿಯರು ಗರ್ಭವನ್ನು ರಕ್ಷಿಸುವಂತೆ ಗುರುಶಿಷ್ಯರು ಪರಮಾತ್ಮನ ವಿಷಯವಾದ ಜ್ಞಾನವನ್ನು ಅಯೋಗ್ಯರಿಗೆ ಉಪದೇಶಿಸದೆ ರಕ್ಷಿಸುತ್ತಾ ಇರುತ್ತಾರೆ. ಹುಟ್ಟಿರುವ ಎಲ್ಲಾ ವಸ್ತುಗಳನ್ನೂ ತಿಳಿದವನಾದ್ದರಿಂದ ಅವನಿಗೆ 'ಜಾತವೇದಾಃ' ('ಜಾತಂ ಸರ್ವಂ ವೇತ್ತಿ') ಎಂಬ ಹೆಸರಿದ್ದಂತೆ ಎಲ್ಲನ್ನೂ ಸಂಹರಿಸುವುದರಿಂದ 'ಅಗ್ನಿ' ಎಂದೂ ಹೆಸರು. (ಅದನಾತ್ ಅಗ್ನಿಃ) ಇಂತಹವನನ್ನು ಜಾಗರಣೆ ಅಂದರೆ ಎಚ್ಚರಿಕೆಯಿಂದ ಇರುವ ಜ್ಞಾನಿಗಳಾದ ಮನುಷ್ಯರು ಪೂಜಾಸಾಮಗ್ರಿಗಳನ್ನು ಯಥಾಶಕ್ತಿಯಾಗಿ ಸಂಗ್ರಹಿಸಿ ಪ್ರತಿದಿವಸವೂ ಪೂಜಿಸಿ ಸ್ತುತಿಸುತ್ತಾರೆ. 'ಜಾಗರಣೆ' ಎಂದರೆ ನಿದ್ದೆಗೆಡುವುದು ಎಂದು ಅರ್ಥವಲ್ಲ, ಪರಮಾತ್ಮನ ಜ್ಞಾನವನ್ನು ಸಂಪಾದಿಸಿ ವೈರಾಗ್ಯ ಭಕ್ತ್ಯಾದಿಗಳನ್ನು ಹೊಂದಿರುವುದೇ ನಿಜವಾದ 'ಜಾಗರಣೆ' (ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ (ಗೀ. 2ನೇ ಅಧ್ಯಾಯ) ಎಂಬಲ್ಲಿ ಹೇಳಿರುವಂತೆ ಪರಮಾತ್ಮನ ಸ್ವರೂಪವು ಇತರ ಜೀವರಿಗೆ ಕತ್ತಲಿನಂತೆ ಇದ್ದರೂ ಭಕ್ತನಿಗೆ ಅದು ಪ್ರಕಾಶ ರೂಪವಾಗಿದ್ದು ಯಾವಾಗಲೂ ತನ್ನ ಜ್ಞಾನಪ್ರಕಾಶವನ್ನು ಉಂಟುಮಾಡುತ್ತಿರುತ್ತದೆ. ಅವನಿಗೆ ಜ್ಞಾನಜಾಗರಣವನ್ನು ಕೊಡುತ್ತಾ ಇರುತ್ತದೆ. ॥ 8 ॥

---

★ (ಆರ್ಯತೇ ಜ್ಞಾಯತೇ ಣಃ ಆಭ್ಯಾಮಿತ್ಯರಣೀ ಗುರುಶಿಷ್ಯೌ).

ಪುನಶ್ಚ ಮಹಿಮೋಕ್ತಿಪೂರ್ವಕಂ ತ್ವತ್ಪೃಷ್ಟಂ ಏತಾದೃಗಿತ್ಯಾಹ ಯತಶ್ಚೋದೇತೀತಿ ।

ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ ।
ತಂ ದೇವಾಃ ಸರ್ವೇಽರ್ಪಿತಾಸ್ತದು ನಾತ್ಯೇತಿ ಕಶ್ಚನ ॥ 9 ॥

ಸೂರ್ಯಃ ಸೃಷ್ಟಿಕಾಲೇ ಯತೋ ಯಸ್ಮಾತ್ ಉದೇತಿ, ಯತ್ರ ಚ ಯಸ್ಮಿಂಶ್ಚ ಹರೌ ಪ್ರಲಯಕಾಲೇ ಅಸ್ತಮದರ್ಶನಂ ಗಚ್ಛತಿ । ತಂ ಸರ್ವೇಽ ದೇವಾ ಅರ್ಪಿತಾಃ ತಮಾಶ್ರಿತ್ಯ ಸ್ಥಿತಾ ಇತ್ಯರ್ಥಃ । ತತ್ ತಂ ಸರ್ವದೇವಾಶ್ರಯಂ ಗುಣತಃ ಸ್ವರೂಪತೋ ವಾ ಕಶ್ಚನ ಕೋಽಪಿ ನ ಉ ನೈವಾತ್ಯೇತಿ ನಾತಿಕ್ರಾಮಾತಿ । ಏತದ್ವೈ ತತ್ ತ್ವಯಾ ಪೃಷ್ಟಮೇತದ್ವೈ ಅರಣ್ಯೋರಿತ್ಯಾದಿನೋಕ್ತಗುಣಕಂ ವೈ ॥ 9 ॥

ಸೂರ್ಯನು ಸೃಷ್ಟಿಕಾಲದಲ್ಲಿ ಪರಮಾತ್ಮನಿಂದಲೇ ಉದಯಿಸುತ್ತಾನೆ. ಪ್ರಲಯಕಾಲದಲ್ಲಿ ಪರಮಾತ್ಮನಲ್ಲಿಯೇ ಲಯವನ್ನು ಹೊಂದಿ ಮರೆಯಾಗುತ್ತಾನೆ. ಇತರ ದೇವತೆಗಳೂ ಆ ಪರಮಾತ್ಮನನ್ನೇ ಆಶ್ರಯಿಸಿ ಅಲ್ಲಿಯೇ ಇರುತ್ತಾನೆ. ಹೀಗೆ ಸಮಸ್ತ ದೇವತೆಗಳಿಗೂ ಆಧಾರನಾದ ಆ ಪರಮಾತ್ಮನನ್ನು ಗುಣಗಳಿಂದಾಗಲೀ ಸ್ವರೂಪದಿಂದಾಗಲೀ ಯಾರೂ ಮೀರಿಸಲಾರರು. ನೀನು ಕೇಳಿದಂತಹ ಪರಬ್ರಹ್ಮವು ಇಂತಹ ಗುಣವುಳ್ಳದ್ದು ಎಂದು ತಿಳಿ. ॥ 9 ॥

ಪ್ರಶ್ನೆ – ಬ್ರಹ್ಮಾದಿ ಸಮಸ್ತಜೀವರ ಹೃದಯಗುಹೆಯಲ್ಲಿ ಪರಮಾತ್ಮನು ಪ್ರೇರಕನಾಗಿದ್ದಾನೆ. ಹೊರಗೂ ಮತ್ಸ್ಯಾದಿ ಅನಂತರೂಪಗಳಿಂದ ಇದ್ದಾನೆ ಎಂದು ಹೇಳಿದಿರಿ. ಈ ರೂಪಗಳಿಗೂ ಮೂಲರೂಪಕ್ಕೂ ಗುಣಕರ್ಮಾದಿಗಳ ವಿಷಯದಲ್ಲಿ ಭೇದ, ಅಥವಾ ಭೇದಾಭೇದವಿದೆಯೇ ?

ಉತ್ತರ:– ಇಲ್ಲ, ಭೇದವಾಗಲೀ ಭೇದಾಭೇದವಾಗಲೀ ಇಲ್ಲ, ಇದೆಯೆಂದು ತಿಳಿದವನಿಗೆ ಅನರ್ಥವೂ ಇದೆ.

ಪೂರ್ವಂ ಗುಹಾಂ ಪ್ರವಿಶ್ಯ ತಿಷ್ಠಂತೀಮಿತ್ಯತ್ರ ಉಕ್ತಮತ್ಸ್ಯಾದ್ಯವತಾರಾಣಾಂ ಬ್ರಹ್ಮಾದಿಭೂತ-ಪ್ರೇರಕಾಣಾಂ ಮೂಲರೂಪೇಣ ಗುಣಕರ್ಮಾದಿನಾ ವಾ ಭೇದೋ ಭೇದಾಭೇದೋ ವಾ ನೇತಿ ಮಹಿಮಾಂತರಮಾಹ- ಯದೇವೇತಿ ।

ಯದೇವೇಹ ತದಮುತ್ರ ಯದಮುತ್ರ ತದನ್ವಿಹ ।
ಮೃತ್ಯೋಸ್ಸಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥ 10 ॥

ಇಹ ದೇಹಾದಿಷು ಯದೇವಾವತಾರಜಾತಮಸ್ತಿ ತದೇವಾಮುತ್ರ ವೈಕುಂಠಾದಿಲೋಕೇಷು ಮೂಲರೂಪತಯಾ ಆಸ್ತೇ । ತಯೋಃ ಕಶ್ಚಿದಪಿ ಭೇದೋ ನಾಸ್ತಿ । ಇಂದ್ರಾರ್ಜುನಾದಾವಿವಾ-ವಾಂತರವಿಶೇಷೋಽಪಿ ನೇತಿ ಭಾವೇನಾಹ - ಯದಮುತ್ರೇತಿ । ಯದಮುತ್ರ ಮೂಲರೂಪಮಸ್ತಿ ತದನು ತದೇವೇಹ ದೇಹಾದಿಷು ಸ್ಥಿತಮವತಾರಜಾತಮ್ । ಗುಣತಃ ಸ್ವರೂಪತೋ ವಾ ನಾಣು-ಮಾತ್ರಂ ವಿಶೇಷೋಽಸ್ತೀತಿ ಭಾವಃ । ಏತಚ್ಚೋಪಲಕ್ಷಣಮ್ । ಇಹಸ್ಥಾನಾಮಪಿ ರೂಪಾಣಾಂ ನಿಯಮ್ಯಾಖ್ಯಸ್ಥಾನಭೇದೇಽಪಿ ನ ಭೇದ ಇತ್ಯಪಿ ಧ್ಯೇಯಮ್ । ತಥಾ ಚ ಸೂತ್ರಂ 'ನ ಸ್ಥಾನತೋಽಪಿ

**ಪರಸ್ಯೋಭಯಲಿಂಗಂ ಸರ್ವತ್ರ ಹಿ' (ಬ್ರ.ಸೂ. 3-2-11) ಇತಿ । ಕುತ ಏತದಿತ್ಯತಸ್ತಥಾ ಪಶ್ಯತೋ-ऽನರ್ಥಸ್ಯ ಸದ್ಭಾವಾದಿತ್ಯಾಹ - ಮೃತ್ಯೋರಿತಿ । ಯಃ ಇಹ ಭಗವನ್ಮೂಲರೂಪಾವತಾರರೂಪೇಷು ನಾನಾ, ಭಾವಪ್ರಧಾನಂ, ನಾನಾತ್ವಂ ಭೇದಂ, ಇವಶಬ್ದಾದ್ ಭೇದಾಭೇದಂ ವಾ ಪಶ್ಯತಿ ಜಾನಾತಿ ಸ ಮೃತ್ಯೋಃ ಮಾರಕಾತ್ ಮೃತ್ಯುಂ ಮರಣಂ ತಮೋಲಕ್ಷಣಂ ಪ್ರಾಪ್ನೋತಿ ॥ 10 ॥**

ಬ್ರಹ್ಮಾದಿ ಜೀವರ ದೇಹಾದಿಗಳಲ್ಲಿರುವ ಪರಮಾತ್ಮನ ರೂಪಗಳು, ಮತ್ತಿತರ ಅವತಾರರೂಪಗಳು, ಇವುಗಳೇ ವೈಕುಂಠಾದಿ ಲೋಕಗಳಲ್ಲಿ ಮೂಲರೂಪದಿಂದ ಇವೆ. ಈ ರೂಪಗಳಿಗೂ ಮೂಲರೂಪಕ್ಕೂ ಯಾವ ಭೇದವೂ ಇಲ್ಲ.

ಪ್ರಶ್ನೆ - ಅರ್ಜುನನು ಇಂದ್ರನ ಅವತಾರವಾದರೂ ಅವನಲ್ಲಿ ಸ್ವಲ್ಪ ವಿಶೇಷವಿರುವಂತೆ ಈ ರೂಪಗಳಿಗೂ ಮೂಲರೂಪಕ್ಕೂ ವಿಶೇಷವಿರಬಹುದಲ್ಲವೇ ?

ಉತ್ತರ:- ಇಲ್ಲ, ಮೂಲರೂಪವೇ ಜೀವಾಂತರ್ಯಾಮಿಯಾದ ಮತ್ತು ಅವತಾರಾತ್ಮಕವಾದ ರೂಪವಾಗಿದೆ. ಮೂಲರೂಪಕ್ಕೂ ಇವುಗಳಿಗೂ ಗುಣ ಸ್ವರೂಪಗಳ ವಿಷಯದಲ್ಲಿ ಸ್ವಲ್ಪವೂ ಭೇದವಿಲ್ಲ. ನಿಯಮ್ಯ ಸ್ಥಾನಗಳು (ಜೀವರು) ಬೇರೆ ಬೇರೆಯಾಗಿದ್ದರೂ ಆ ರೂಪಗಳಿಗೆ ಭೇದವಿಲ್ಲ.★

ಯಾವನು ಪರಮಾತ್ಮನ ಮೂಲರೂಪ ಮತ್ತು ಅವತಾರರೂಪಗಳಲ್ಲಿ ಭೇದವನ್ನೂ ಭೇದಾಭೇದವನ್ನೂ ತಿಳಿಯು-ತ್ತಾನೋ ಅವನು ಮಾರಕನಾದ ಯಮನಿಂದ (ಪರಮಾತ್ಮನಿಂದ) ತಮಸ್ಸು ಎಂಬ ದೊಡ್ಡ ಅನರ್ಥವನ್ನು ಹೊಂದುತ್ತಾನೆ. ॥ 10 ॥

**ಭಗವದ್ರೂಪಾಣಾಂ ಭೇದಾದಿರ್ನೇತ್ಯುಕ್ತ್ವಾ ಸ್ವಾವಯವಗುಣಕರ್ಮಭಿಃ ಭೇದಾದಿರ್ನೇತ್ಯಾಹ - ಮನಸೈವೇತಿ ।**

---

★ ಓಂ ನ ಸ್ಥಾನತೋऽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ, (ಬ್ರ.ಸೂ. ಮೂರನೆಯ ಅಧ್ಯಾಯ 2ನೇ ಪಾದ 11ನೇ ಸುತ್ರ). ವಿಷ್ಣುವಿಗೆ ಕಣ್ಣು ಮುಂತಾದ ಸ್ಥಾನಬೇಧದಿಂದ ಭಿನ್ನಸ್ವರೂಪವಿಲ್ಲ. ಎಲ್ಲ ಸ್ಥಾನಗಳಲ್ಲಿಯೂ ಇರುವ ಪರಮಾತ್ಮನು ಒಬ್ಬನೇ, ಮತ್ತು ಸಮಗ್ರ ಅವಯವ ಉಳ್ಳವನೂ ಆಗಿದ್ದಾನೆ. (ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತೇ - ಐ. ಆ. 3-2-3) ದೇವತೆಗಳು ಮನುಷ್ಯರು ಮುಂತಾದವರ ದೇಹಗಳಲ್ಲಿಯೂ ಚಕ್ಷುರಾದಿ ಸ್ಥಾನಗಳಲ್ಲಿಯೂ ಪರಮಾತ್ಮನು ಪೂರ್ಣನಾಗಿದ್ದಾನೆ ಎಂದು ಜ್ಞಾನಿಗಳು ಹೇಳುತ್ತಾರೆ ಎಂದು ಶ್ರುತಿಯ ಅರ್ಥ. ಸೂತ್ರಾರ್ಥಕ್ಕೆ ಇದು ಪ್ರಮಾಣ.

(ಓಂ ಉಭಯವ್ಯಪದೇಶಾತ್ತ್ವಹಿ ಕುಂಡಲವತ್ ಓಂ, (ಬ್ರ.ಸೂ.ತೃ.ಅ.ದ್ವಿ. ಪಾದ ಸೂ. 28. ಅಧಿಕರಣ 15) ಎಂಬ ಅಹಿಕುಂಡಲಾಧಿಕರಣದಲ್ಲಿ ಪರಬ್ರಹ್ಮನನ್ನು ಆನಂದಾದಿಗುಣಸ್ವರೂಪನೆಂದೂ, ಆನಂದವೆಂಬ ಗುಣವುಳ್ಳವನೆಂದೂ ಹೇಳಿದೆ. ಸ ಏಷ ಪರಮ ಆನಂದ (ಬೃ.6-3-13) ಎಂಬ ಬೃಹದಾರಣ್ಯಕಶ್ರುತಿಯು ಬ್ರಹ್ಮವು ಆನಂದಸ್ವರೂಪವೆಂದು ಹೇಳಿದೆ. (ಆನಂದಂ ಬ್ರಹ್ಮಣೋ ವಿದ್ವಾನ್, ತೈ, ಉ) ಬ್ರಹ್ಮ ಆನಂದ ಎಂದು ಭೇದವನ್ನು ವ್ಯವಹರಿಸಿದೆ. ಸುರುಳಿ ಸುತ್ತಿರುವ ಹಾವನ್ನು ಕುಂಡಲವೆಂದೂ, ಕುಂಡಲಿ ಕುಂಡಲವುಳ್ಳದ್ದೆಂದೂ ಹೇಳುತ್ತಾರೆ. ಅದರಂತೆಯೇ ಪರಬ್ರಹ್ಮವು ಆನಂದರೂಪವು ಆನಂದವುಳ್ಳದು ಎಂಬ ವ್ಯವಹಾರವು ಸರಿಹೊಂದುತ್ತದೆ.

ಓಂ ಪ್ರತಿಷೇಧಾಚ್ಚ ಓಂ (ಬ್ರ.ಸೂ.ತೃ.ಅ.ತೃ.ಪಾದ 31ನೇ ಸೂತ್ರ) ನೇಹ ನಾನಾಸ್ತಿ ಕಿಂಚನ (ಕಾಠಕ 2-4-11) ಎಂಬುದಾಗಿ ಈ ಶ್ರುತಿಯು ಬ್ರಹ್ಮನಲ್ಲಿ ಅವನಿಗಿಂತ ಭಿನ್ನವಾದ ಗುಣಾದಿಗಳಿಲ್ಲವೆಂದು ಹೇಳಿದೆ. ಈ ಪ್ರಮಾಣಾನುಸಾರವಾಗಿ ಬ್ರಹ್ಮನು ಗುಣರೂಪನೂ ಗುಣವುಳ್ಳವನೂ ಆಗಿದ್ದಾನೆಂದು ಗುಣಗುಣಿಗಳಿಗೆ ಭೇದವಿಲ್ಲವೆಂದೂ ತಿಳಿಯತಕ್ಕದ್ದು.

**ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ ।**
**ಮೃತ್ಯೋಃಸ್ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ ॥ 11 ॥**

**ಇಹ ಮೂಲರೂಪೇ ಅವತಾರರೂಪೇಷು ವಾ ಕಿಂಚನ ಗುಣಕರ್ಮಾದಿಕಂ ನಾನಾ ಭಿನ್ನಂ ನಾಸ್ತಿ । ತದಾಹ ಉಭಯವ್ಯಪದೇಶಾದಿತಿನಯೇ 'ಪ್ರತಿಷೇಧಾಚ್ಚ' (ಬ್ರ.ಸೂ. -3-2-31) ಇತಿ ಸೂತ್ರಕಾರಃ । ಇದಂ ರೂಪಾದಿಷು ಭೇದಾದಿಕಂ ನ ಇತ್ಯೇತತ್ಪ್ರಮೇಯಂ ಮನಸೈವ ಮನನಸಮರ್ಥೇನೈವ ಅಂತಃಕರಣೇನೈವಾಪ್ತವ್ಯಂ ಜ್ಞಾತವ್ಯಮ್ । ನ ತು ಭೇದಕಾರ್ಯವ್ಯವಹಾರಾದಿಹೇತುಬಲೇನಾಪಲಪ-ನೀಯಮ್ । ಕುತ ಏವಮಿತ್ಯತೋಽನ್ಯಥಾ ಪಶ್ಯತೋಽನರ್ಥಸತ್ವಾತ್ ಇತ್ಯಾಹ- ಮೃತ್ಯೋರಿತಿ । ನಾನೇವೇತಿ - ಭಿನ್ನಂ ಭಿನ್ನಾಭಿನ್ನಂ ವಾ । ಇಹ ಗುಣಕರ್ಮಾದಿಷು । ಅತೋ ನ ಪೂರ್ವೇಣ ಪೌನರುಕ್ತ್ಯಮ್ । ತಸ್ಯ ಸ್ವರೂಪವಿಷಯತ್ವಾದಸ್ಯ ಚ ಗುಣಕರ್ಮಾವಯವವಿಷಯತ್ವಾತ್ ॥ 11 ॥**

ಪರಮಾತ್ಮನ ರೂಪಗಳಲ್ಲಿ ಪರಸ್ಪರ ಭೇದ ಅಥವಾ ಭೇದಾ ಭೇದಗಳಿಲ್ಲ ಇಷ್ಟೇ ಅಲ್ಲ; ಪರಮಾತ್ಮನಿಗೂ ಅವನ ಅವಯವ ಗುಣಕರ್ಮಗಳಿಗೂ ಪರಸ್ಪರ ಭೇದ ಅಥವಾ ಭೇದಾಭೇದಗಳಿಲ್ಲವೆಂದು ತಿಳಿಯಬೇಕು. ಜೀವನ ಸ್ವರೂಪಕ್ಕೂ ಅವನ ಪ್ರಾಕೃತವಾದ ಅವಯವ ಗುಣಕರ್ಮಗಳಿಗೂ ಭೇದವಿದೆಯಷ್ಟೇ. ಅದರಂತೆ ಅಲ್ಲವೆಂದು ತಿಳಿಯಬೇಕು.

ಪರಮಾತ್ಮನ ಮೂಲರೂಪ ಮತ್ತು ಅವತಾರರೂಪಗಳಲ್ಲಿ ಕೈ ಕಾಲು, ಮುಂತಾದ ಅವಯವಗಳೂ, ಜ್ಞಾನ ಆನಂದ ಮೊದಲಾದ ಗುಣಗಳೂ ನಡೆಯುವುದು, ನೋಡುವುದು ಮುಂತಾದ ಕ್ರಿಯೆಗಳೂ ಇವೆಯಷ್ಟೇ ? ಅವುಗಳು ಪರಮಾತ್ಮನಿಗಿಂತ ಬೇರೆಯಲ್ಲ. ಈ ಪ್ರಮೇಯವನ್ನು ಮನನ ಮಾಡಲು ಸಮರ್ಥವಾದ ಅಂತಃಕರಣದಿಂದಲೇ ವಿಚಾರಿಸಿ ತಿಳಿಯಬೇಕು. ದೇವರ ಕೈ, ದೇವರ ಜ್ಞಾನ, ದೇವರ ಗಮನ, ಮುಂತಾದ ವ್ಯವಹಾರಗಳು ಕಂಡು ಬರುವುದರಿಂದ ಪರಮಾತ್ಮನಿಗೂ ಅವನ ಕೈಕಾಲು ಮುಂತಾದವುಗಳಿಗೂ ಭೇದವಿದೆಯೆಂದು ತಿಳಿಯಬಾರದು. ಲೋಕದಲ್ಲಿ ದೇವದತ್ತನ ಕೈ, ಅವನ ಓಟ, ಅವನ ಜ್ಞಾನ ಎಂಬ ವ್ಯವಹಾರಗಳಿರುವುದರಿಂದ ಆವು ದೇವದತ್ತನೆಂಬ ವ್ಯಕ್ತಿಗೂ ಅವನ ಕೈ ಮುಂತಾದುವುಗಳಿಗೂ ಭೇದವಿದೆಯೆಂದು ತಿಳಿಯುತ್ತೇವೆ. ಪರಮಾತ್ಮನಿಗೂ ಅವನ ಅವಯವಾದಿಗಳಿಗೂ ಅದರಂತೆ ಭೇದವನ್ನು ತಿಳಿಯಕೂಡದು. (ಅಭೇದವಿದ್ದರೂ ವಿಶೇಷವೆಂಬ ಧರ್ಮದಿಂದ ಅವುಗಳಿಗೆ ಪರಸ್ಪರವಾಗಿಯೂ ಪರಮಾತ್ಮನಿಂದಲೂ ಭೇದವನ್ನು ವ್ಯವಹರಿಸುತ್ತೇವೆ).

ಹೀಗೆ ತಿಳಿಯದೆ ಇದಕ್ಕೆ ವಿಪರೀತವಾಗಿ ತಿಳಿದರೆ ಅನರ್ಥವಿದೆ. ಎಲ್ಲರನ್ನೂ ಸಂಹರಿಸುವ ಪರಮಾತ್ಮನ ಕ್ರೋಧಾಗ್ನಿಯು ಈ ಮಿಥ್ಯಾಜ್ಞಾನಿಗಳಿಗೆ ತಮಸ್ಸು ಎಂಬ ಅನರ್ಥವನ್ನೂ ಉಂಟುಮಾಡುತ್ತದೆ. ಪರಮಾತ್ಮನ ಅವಯವ ಗುಣಕ್ರಿಯೆಗಳಿಗೆ ಪರಸ್ಪರವಾಗಿಯೂ ಭೇದವನ್ನು ತಿಳಿದರೆ ಹಿಂದೆ ಹೇಳಿದ ಅನರ್ಥವೇ ಉಂಟಾಗುತ್ತದೆ.

**ಗುಹಾಂ ಪ್ರವಿಶ್ಯ ತಿಷ್ಠಂತೀಮಿತ್ಯತ್ರೋಕ್ತನಿಯಾಮಕರೂಪಾಣಾಂ ನಿಯಮ್ಯಭೂತಸ್ಥಾನಭೇದ-ಪ್ರಸಕ್ತಂ ಭೇದಂ ನಿರಸ್ಯ ಇದಾನೀಂ ಗುಹಾಸ್ಥಸ್ಯೋಪಾಸನಾರ್ಥಂ ಪರಿಮಾಣವಿಶೇಷಮಾಹ- ಅಂಗುಷ್ಠ-ಮಾತ್ರ ಇತಿ ।**

**ಅಂಗುಷ್ಠಮಾತ್ರಃ ಪುರುಷಃ ಮಧ್ಯ ಆತ್ಮನಿ ತಿಷ್ಠತಿ ।**
**ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ । ಏತದ್ವೈತತ್ ॥ 12 ॥**

**ಕಥಂ ಅಪರಿಚ್ಛಿನ್ನಸ್ಯ ತನ್ಮಾತ್ರತ್ವಂ ಇತ್ಯತ ಆಹ- ಮಧ್ಯೇ ಆತ್ಮನೀತಿ । ಆತ್ಮನೋ ದೇಹಸ್ಯ ಜೀವಸ್ಯ ವಾ ಮಧ್ಯೇ ಹೃದಯೇ ತಿಷ್ಠತೀತ್ಯುಕ್ತ್ವಾ ಹೃದಯಸ್ಯ ತತ್ತದಂಗುಷ್ಠಪರಿಮಿತತ್ವಾತ್ ತತ್ರಸ್ಥೋऽಪಿ ತಥೋಪ-ಚರ್ಯತೇ । ಸ್ಥಾನೈಕ್ಯೇನ ಗೋಷ್ಠೇ ಗಾವಃ ಏಕೀಭೂತಾ ಇತಿವದಿತಿ ವಾ ॥ ತನ್ಮಾತ್ರಪರಿಮಾಣಾಭಿವ್ಯಕ್ತ್ಯಾ ವಾ ತಥೋಚ್ಯತ ಇತಿ ಭಾವಃ । ತದುಕ್ತಂ ಸೂತ್ರೇ 'ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್' (ಬ್ರ.ಸೂ. 1-3-25)4 ಇತಿ । ಪುರುಷೋ ಜೀವ ಇತಿ ಭ್ರಮನಿರಾಸಾಯ ಗುಣಾಂತರಮಾಹ - ಈಶಾನ ಇತಿ । ಭೂತಭವ್ಯಸ್ಯೇತ್ಯತ್ರ ದ್ವಂದ್ವೈಕವದ್ಭಾವಃ । ಭೂತಭಾವಿನೋಃ ಪ್ರೇರಕಃ । ತತಃ ಹೃದಯಸ್ಥಸ್ಯ ಪ್ರೇರಕತ್ವಾದೇವ ತಜ್ಜ್ಞಾನೀ ನ ವಿಜುಗುಪ್ಸತೇ ಆತ್ಮಾನಂ ಗೋಪ್ತುಂ ನೇಚ್ಛತಿ । ಆತ್ಮರಕ್ಷಾರ್ಥಂ ನ ಪ್ರಯತತೇ । ಏತದ್ವೈ ತತ್ ತ್ವಯಾ ಪೃಷ್ಟಂ ವಸ್ತು ಏತದ್ವೈ । ಯದೇವೇಹೇತ್ಯಾದಿನೋಕ್ತಗುಣಕಂ ವೈ ಇತಿ ॥ 12 ॥**

ಎಲ್ಲಾ ಪ್ರಾಣಿಗಳ ಹೃದಯಗುಹೆಗಳಲ್ಲಿ ಪರಬ್ರಹ್ಮನು ತಾನು ನಿಯಾಮಕನಾಗಿ ಅನಂತಾನಂತ ಸ್ಥಾನಗಳಲ್ಲಿ ಇರು-ತ್ತಾನೆ. ಆ ಪ್ರಾಣಿಗಳು ಬೇರೆ ಬೇರೆಯಾಗಿದ್ದರೂ ಪರಬ್ರಹ್ಮನು ಬೇರೆಯಲ್ಲ, ಒಬ್ಬನೇ ಇರುತ್ತಾನೆ ಎಂಬ ಪ್ರಮೇಯವನ್ನು ವಿವರಿಸಿದ್ದಾಯಿತು.

ಈಗ ಹೃದಯಗುಹೆಯಲ್ಲಿರುವ ಪರಮಾತ್ಮನನ್ನು ಹೇಗೆ ಸೇವಿಸಬೇಕು. ಅವನ ಉಪಾಸನೆಯನ್ನು ಹೇಗೆ ಮಾಡ-ಬೇಕು ? ಅವನ ಪ್ರಮಾಣವೆಷ್ಟು ? ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಹೇಳುತ್ತಾರೆ.

ಆಯಾ ಜೀವನ ದೇಹದಲ್ಲಿ ಆ ದೇಹದ ಹೆಬ್ಬೆರಳಿನ ಗಾತ್ರದಿಂದ ಪರಮಾತ್ಮನು ಇರುತ್ತಾನೆ. ಆಯಾ ಜೀವನ ಸ್ವರೂಪದೇಹದಲ್ಲಿ ಆ ಸ್ವರೂಪದೇಹದ ಹೆಬ್ಬೆರಳಿ ಗಾತ್ರದಿಂದ ಪರಮಾತ್ಮನು ಇರುತ್ತಾನೆ. ಗೋವುಗಳೆಲ್ಲವೂ ಒಂದೇ ಸ್ಥಾನದಲ್ಲಿ ಸೇರಿದಾಗ (★ಏಕೀಭೂತಾಗಾವಃ) ಗೋವುಗಳು ಒಂದಾದವು ಎಂದು ಹೇಳುತ್ತಾರೆ. ಇಲ್ಲಿ ಸ್ಥಾನದಲ್ಲಿರುವ ಧರ್ಮವನ್ನು ಸ್ಥಾನಿಯಲ್ಲಿ ಹೇಳಿದಂತೆ★ ಹೃದಯಾಕಾಶವು ಜೀವನ ಅಂಗುಷ್ಠ ಪರಿಮಿತವಾಗಿರುವುದರಿಂದ ಅಲ್ಲಿರುವ ಪರಮಾತ್ಮನು ಅಂಗುಷ್ಠ ಪರಿಮಿತನೆಂದು ಹೇಳಿದೆ. ಉಪಾಸನೆಗೋಸ್ಕರ ಈ ಪರಿಮಾಣವನ್ನು ಪರಮಾತ್ಮನು ಸ್ವೀಕರಿ-ಸುತ್ತಾನೆ. ವಸ್ತುತಃ ಅವನು ಅಪರಿಚ್ಛಿನ್ನನು, ಅಳತೆಗೆ ಸಿಗದವನು. ಜೀವರ ಬಾಹ್ಯದೇಹ ಮತ್ತು ಸ್ವರೂಪದೇಹ-ದಲ್ಲಿರುವವನು ಜೀವನೇ ಆಗಿರಬಾರದೇ ? ಅಲ್ಲ, ಭೂತಭವಿಷ್ಯದ್ವರ್ತಮಾನವಾದ ಎಲ್ಲಾ ಘಟನೆಗಳಿಗೆ ಪ್ರೇರಕವಾದ ವಸ್ತುವೇ ಹೃದಯ ಗುಹೆಯಲ್ಲಿದೆ ಎಂದು ಹೇಳಿದೆಯಷ್ಟೇ ? ಆ ವಸ್ತುವು ಜೀವನಾಗಲು ಸಾಧ್ಯವಿಲ್ಲವಷ್ಟೇ ? ನಮಗಿಂತ

---

★ ಕೊಟ್ಟಿಗೆಯು ಒಂದಾದುದರಿಂದ ಅಲ್ಲಿ ಸೇರಿರುವ ಗೋವುಗಳು ಒಂದಾದುವು ಎಂದು ವ್ಯವಹಾರ.

★ ಓಂ ಹೃದ್ಯಪೇಕ್ಷಯಾ ತು ಮನುಷ್ಯಾಧಿಕಾರತ್ವಾತ್ ಓಂ, ಬ್ರ.ಸೂ.ಪ್ರ.ತೃ. ಅಧಿಕರಣ 7 ಸೂತ್ರ 25. ಈ ಸೂತ್ರದಲ್ಲಿ ಮೇಲಿನ ಮಂತ್ರದ ಅಭಿಪ್ರಾಯವನ್ನು ಯುಕ್ತಿಯುಕ್ತವಾಗಿ ಸಮರ್ಥಿಸಿದ್ದಾರೆ.

ಭಿನ್ನವಾದ ಪರಬ್ರಹ್ಮವು ನಮಗೆ ಪ್ರೇರಕವೆಂದು ತಿಳಿದ ಜ್ಞಾನಿಯು ಪರಬ್ರಹ್ಮವೇ ತನಗೆ ರಕ್ಷಕವೆಂದು ತಿಳಿದಿರುವುದರಿಂದ ತನ್ನನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸುವುದಿಲ್ಲ.

ಎಲೈ ನಚಿಕೇತನೇ ! ನೀನು ಹೇಳಿರುವ ಪರಬ್ರಹ್ಮವಸ್ತುವು ಇಂತಹ ಗುಣಗಳಿಂದ ಕೂಡಿರುತ್ತದೆಯೆಂದು ತಿಳಿ.

*ಪರಬ್ರಹ್ಮವು ಎಲ್ಲಾ ಸ್ಥಳಗಳಲ್ಲಿಯೂ ವ್ಯಾಪಿಸಿಕೊಂಡಿದ್ದರೂ ಜೀವನ ಹೃದಯಗುಹೆಯಲ್ಲಿ ಪ್ರೇರಕವಾಗಿ, ಜೀವನ ಹೆಬ್ಬೆರಳಿನ ಪರಿಮಾಣದಿಂದ ಇರುತ್ತದೆ. ಪಶುಪಕ್ಷಿ ಮುಂತಾದವುಗಳಿಗೆ ಅಂಗುಷ್ಠವಿಲ್ಲ. ಆದರೂ ಉಪಾಸನೆಯಲ್ಲಿ ಅದಿಕಾರಿಗಳಾದ ಮನುಷ್ಯರ ದೃಷ್ಟಿಯಿಂದಲೇ ಪರಬ್ರಹ್ಮವು ಅಂಗುಷ್ಠ ಪರಿಮಿತವೆಂದು ಹೇಳಿದ್ದಾಗಿದೆ. ಮನುಷ್ಯರಂತೇ ಅಂಗುಷ್ಠವಿಲ್ಲದರಿರುವ ಪಶು ಪಕ್ಷ್ಯಾದಿಗಳಿಗೆ ಉಪಾಸನೆಯೂ ಇಲ್ಲ. ಪಶುಪಕ್ಷ್ಯಾದಿಗಳಲ್ಲಿ ಪರಮಾತ್ಮನು ಅಂಗುಷ್ಠ ಪರಿಮಿತನಾಗಿ ಇರುವುದೂ ಇಲ್ಲ.

ಮಹಾಭಾರತ ಖಾಂಡವ ದಹನ ಸಂದರ್ಭದಲ್ಲಿ ಬರುವ ಕಥೆಯಂತೆ ಜರಿತಾರಿ ಮುಂತಾದ ಪಕ್ಷಿಗಳು ಜ್ಞಾನಿಗಳಾಗಿ ಪರಮಾತ್ಮನ ಉಪಾಸನೆ ಮಾಡುತ್ತಿದ್ದುವು ಎಂದು ಕಂಡುಬರುತ್ತದೆ. ಆದರೂ ಅವುಗಳಿಗೂ ಅಂಗುಷ್ಟ ಪರಿಮಿತನಾದ ಪರಮಾತ್ಮನ ಉಪಾಸನೆಯಿಲ್ಲವೆಂದೇ ತಿಳಿಯಬೇಕು.

**ಉಕ್ತಾನುವಾದೇನ ಗುಣಾಂತರಮಾಹ – ಅಂಗುಷ್ಠೇತಿ ।**

**ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ।**
**ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವಃ । ಏತದ್ವೈ ತತ್ ॥ 13 ॥**

**ಅಧೂಮಕಃ ನಿರ್ಮಲಃ । ಸ ಏವಾದ್ಯ, ಸ ಉ ಶ್ವಃ ಸ ಏವ ಶ್ವಃ । ಅನಾದಿನಿತ್ಯ ಇತ್ಯರ್ಥಃ । ಏತದ್ವೈ ತದಿತಿ ಪ್ರಾಗ್ವತ್ ॥ 13 ॥**

ಇಷ್ಟೇ ಅಲ್ಲ, ಆ ಪರಮಾತ್ಮನಲ್ಲಿ ಇನ್ನೂ ಅನೇಕ ಗುಣಗಳಿವೆ. ನಚಿಕೇತನೇ, ಜೀವನ ಹೃದಯಗುಹೆಯಲ್ಲಿ ಅವನ ಅಂಗುಷ್ಠಪರಿಮಿತನಾದ ಪರಮಾತ್ಮನು ನೆಲಸಿರುತ್ತಾನೆಂದು ನಾನು ತಿಳಿಸಿದೆನಷ್ಟೆ ? ಆ ಪರಮಾತ್ಮನು ಹೊಗೆಯಿಲ್ಲದ ಜ್ಯೋತಿಸ್ಸಿನಂತೆ ಬೆಳಗುತ್ತಿದ್ದಾನೆ. ಹಿಂದೆಯೇ ಹೇಳಿದಂತೆ ತ್ರಿಕಾಲದಲ್ಲಿರುವ ಪದಾರ್ಥಗಳಿಗೂ ಪ್ರೇರಕನಾಗಿದ್ದಾನೆ. ಈ ದಿನ ಇರುವವನೂ ಅವನೇ, ನಾಳೆ ಇರುವವನೂ ಅವನೇ, ಹಿಂದೆ ಇದ್ದವನೂ ಅವನೇ, ಹೀಗೆ ತ್ರಿಕಾಲಾಬಾಧಿತ ಸತ್ಯಸ್ವರೂಪನಾದ ಪರಮಾತ್ಮನನ್ನು ಜ್ಞಾನಿಗಳು ಸರಿಯಾಗಿ ತಿಳಿಯುತ್ತಾರೆ.

**ಕಿಂಚನೇತಿ ವಾಕ್ಯಶೇಷೇ ನಾನೇತಿ ನಾನಾಶಬ್ದೇನ ಭೇದಸ್ಯ, ಇವಶಬ್ದೇನ ತದ್ವಿರುದ್ಧಸ್ಯಾಭೇದಸ್ಯ ಪ್ರತೀತ್ಯಾ ಭೇದಾಭೇದದರ್ಶಿನ ಏವಾನರ್ಥೋಕ್ತೇರ್ಭೇದದರ್ಶಿನಸ್ತದನುಕ್ತೇಃ ಭೇದ ಏವಾಸ್ತು ಧರ್ಮಾಣಾಂ ಇತ್ಯತೋ ಧರ್ಮಾಣಾಂ ಭೇದಜ್ಞಾನೇ ಅನರ್ಥಂ ಸ್ಪಷ್ಟಯತಿ- ಯಥೇತಿ ॥**

**ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।**
**ಏವಂ ಧರ್ಮಾನ್ ಪೃಥಕ್‌ಪಶ್ಯಂಸ್ತಾನೇವಾನುವಿಧಾವತಿ ॥ 14 ॥**

**ಪರ್ವತೇಷು ದುರ್ಗೇ ಊರ್ಧ್ವಭಾಗೇ ಶಿಖರೇ ವೃಷ್ಟಮುದಕಂ ಯಥಾ ಅಧೋ ವಿವಿಧತಯಾ ಧಾವತಿ ಗಚ್ಛತಿ ಏವಂ ವಿಷ್ಣೋರ್ಧರ್ಮಾನ್ ಪೃಥಕ್ ಆಶ್ರಯಾದನ್ಯೋನ್ಯಂ ವಾ ಭೇದೇನ ಪಶ್ಯನ್ ಜಾನನ್ ತಾನೇವ ಭೇದೇನ ದೃಷ್ಟ್ವಾನನು ತದ್ದರ್ಶನಾನಂತರಮೇವ ವಿಧಾವತಿ ತಮಃ ಪ್ರಾಪ್ನೋತಿ । ॥ 14 ॥**

ನಚಿಕೇತನು ಪ್ರಶ್ನೆ ಮಾಡುತ್ತಾನೆ :- ಪರಮಾತ್ಮನ ರೂಪ, ಗುಣ, ಕ್ರಿಯೆಗಳಿಗೆ ಭೇದಾಭೇದವಿಲ್ಲ ಎಂದಿಷ್ಟೇ ಹಿಂದೆ ಹೇಳಿದಂತಾಗಿದೆ. ''ನಾನೇವ ಪಶ್ಯತಿ'' ಎಂಬ ವಾಕ್ಯಕ್ಕೆ ನಾನಾ ಎಂದರೆ ಭೇದ ಇವ ಎಂದರೆ ಅಭೇದ ಎಂಬ ಅಭಿಪ್ರಾಯವಿಟ್ಟುಕೊಂಡು ಭೇದಾಭೇದವನ್ನು ಮಾತ್ರವೇ ನಿಷೇದ ಮಾಡಿರುತ್ತಾರೆ. ರೂಪಾದಿಗಳಿಗೆ ಭೇದವಿರಲಿ. ಭೇದವನ್ನು ನಿಷೇಧಿಸಿಲ್ಲವಲ್ಲವೇ ?

ಯಮನು ಈ ಪ್ರಶ್ನೆಗೆ ಉತ್ತರಕೊಡುತ್ತಿದ್ದಾನೆ :- ಪರ್ವತಗಳ ಕಡಿದಾದ ಮೇಲ್ಭಾಗದ ಶಿಖರಗಳಲ್ಲಿ ಸುರಿದ ಮಳೆಯ ನೀರು ಅನೇಕ ದಾರಿಗಳಿಂದ ಕೆಳಕ್ಕೆ ಹರಿದು ಬರುತ್ತದೆ. ಹೀಗೆಯೇ ಪರಮಾತ್ಮನ ಬೇರೆ ಬೇರೆ ರೂಪಗಳು, ಗುಣಗಳು ಮತ್ತು ಕ್ರಿಯೆಗಳಿಗೆ ಪರಮಾತ್ಮನಿಂದ ಭೇದವನ್ನೂ, ಆ ರೂಪಾದಿಗಳಿಗೆ ಪರಸ್ಪರ ಭೇದವನ್ನೂ ತಿಳಿದವನು ಈ ಮೇಲೆ ಹೇಳಿದ ಅನರ್ಥಕರವಾದ ಅಜ್ಞಾನದಿಂದ ಅಧೋಗತಿಯನ್ನು ಹೊಂದುತ್ತಾನೆ. ಅವನಿಗೆ ತಮಸ್ಸು ಎಂಬ ಮಹಾನರ್ಥವು ಕಟ್ಟಿಟ್ಟಬುತ್ತಿಯಾಗಿದೆ.

**ನನು ಈಶ್ವರಸ್ಯ ಕಥಂ ಪ್ರೇರಕತ್ವಂ ? ಮುಕ್ತಸ್ಯ ತದನುಪ್ರವೇಶೇನ ತೇನೈಕ್ಯಾದಿತ್ಯತೋ ನೈವಮಿತ್ಯಾಹ - ಯಥೇತಿ ॥**

**ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।**
**ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥ 15 ॥**

ಇತಿ ದ್ವಿತೀಯಾಧ್ಯಾಸ್ಯ ಪ್ರಥಮಾ ವಲ್ಲೀ ॥

**ಯಥಾ ಶುದ್ಧಮುದಕಂ ಶುದ್ಧೋದಕೇ ಸಿಕ್ತಂ ಸ್ಥಾಪಿತಂ ಸತ್ ತಾದೃಗೇವ ಭವತಿ, ನ ತು ತದೇವ, ವೃದ್ಧಿದರ್ಶನಾತ್ ।**

**ವಿಜಾನತೋ ಮುನೇಃ ವಿಜಾನತಾಂ ಮುನೀನಾಮಾತ್ಮಾ ಸ್ವಾಮೀ ಮುಕ್ತಶ್ಚತುರ್ಮುಖಃ ಏವಂ ಭವತಿ ಭಗವತ್ಸದೃಶ ಏವ ಭವತಿ । ನ ತು ತದೈಕ್ಯಮಾಪ್ನೋತಿ, ಜೀವಾಸ್ತು ನಾಪ್ನುವಂತಿ ಇತಿ ಕಿಮು ವಕ್ತವ್ಯಂ ಇತ್ಯರ್ಥಃ । ಅತ ಉಕ್ತಂ ಯುಕ್ತಮಿತಿ ಭಾವಃ । ಗೌತಮೇತಿ ನಚಿಕೇತಸಃ ಸಂಬೋಧನಮ್ ॥ 14 ॥**

**ಇತಿ ಕಾಠಕಾರ್ಥಸಂಗ್ರಹೇ ದ್ವಿತೀಯಾಧ್ಯಾಯೇ ಪ್ರಥಮಾ ವಲ್ಲೀ ॥**

ಗುರುದೇವ ! ಜೀವನು ಮುಕ್ತಿಯಲ್ಲಿ ಪರಮಾತ್ಮನೊಂದಿಗೆ ಏಕೀಭಾವವನ್ನು ಪಡೆಯುತ್ತಾನೆಂದು ಕೆಲವರು ಹೇಳುತ್ತಾರೆ. ಹೀಗೆ ಜೀವ ಪರಮಾತ್ಮರಿಗೆ ಐಕ್ಯ ಉಂಟಾದರೆ ಪ್ರೇರಕನು ಯಾರಿಗೆ ಪ್ರೇರಣೆಯನ್ನು ಮಾಡುವನು ? ಆದುದರಿಂದ ಈಶ್ವರನು ಪ್ರೇರಕ ಜೀವನು ಪ್ರೇರಿಸಲ್ಪಡುವವನು ಎಂಬ ಮಾತು ಸರಿಹೊಂದಲಾರದಷ್ಟೇ.

ಈ ಪ್ರಶ್ನೆಯು ನಚಿಕೇತುವಿನಿಂದ ಬರಬಹುದೆಂದು ತಿಳಿದು ದಂಡಧರನು ಉತ್ತರಿಸುತ್ತಿದ್ದಾನೆ.

ಒಂದು ಪಾತ್ರೆಯಲ್ಲಿ ಶುದ್ಧವಾದ ನೀರಿದೆಯೆಂದು ತಿಳಿಯೋಣ. ಇನ್ನೊಂದು ಪಾತ್ರೆಯಲ್ಲಿರುವ ಶುದ್ಧವಾದ ನೀರನ್ನು ಅದಕ್ಕೆ ಸೇರಿಸಿದರೆ, ಸೇರಿಸಿದ ನೀರು ಮೊದಲಿನ ನೀರಿನಂತಾಗುತ್ತದೆ. ಎರಡು ನೀರುಗಳು ಒಂದಾಗುವುದಿಲ್ಲ. ಹಾಗೆ ಎರಡು ನೀರು ಒಂದಾಗುವುದಾದರೆ ನೀರಿನಲ್ಲಿ ವೃದ್ಧಿಯು ಕಾಣಿಸುತ್ತಿರಲಿಲ್ಲ.

ಹೀಗೆಯೇ ಚತುರ್ಮುಖಬ್ರಹ್ಮನು ಮುಕ್ತಿಯಲ್ಲಿ ಪರಮಾತ್ಮನಂತೆ ಆಗುತ್ತಾನೆ: ಪರಮಾತ್ಮನ ಸಾರೂಪ್ಯವನ್ನು ಹೊಂದುತ್ತಾನೆ. ಚತುರ್ಮುಖನು, ಪರಮಾತ್ಮನೇ ಆದರೆ ಪರಮಾತ್ಮಾಭಿನ್ನನು ಆಗುವುದಿಲ್ಲ. ಎಲ್ಲಾ ಜ್ಞಾನಿಗಳಿಗೂ ಸ್ವಾಮಿಯಾಗಿ, ಅವರನ್ನು ಪರಮಾತ್ಮನ ಬಳಿಗೆ ಒಯ್ಯುವ ಚತುರ್ಮುಖಬ್ರಹ್ಮನೇ ಪರಬ್ರಹ್ಮನಲ್ಲಿ ಐಕ್ಯವನ್ನು ಹೊಂದು- ವುದಿಲ್ಲವೆಂದ ಮೇಲೆ ಉಳಿದ ಜೀವರು ಮುಕ್ತಿಯಲ್ಲಿಯೂ ಪರಮಾತ್ಮನಲ್ಲಿ ಐಕ್ಯವನ್ನು ಹೊಂದುವುದಿಲ್ಲವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಯೇ ಇಲ್ಲ.

*ಇಲ್ಲಿಗೆ ಕಾಠಕೋಪನಿಷತ್ತಿನಲ್ಲಿ ದ್ವಿತೀಯಾಧ್ಯಾಯ ಪ್ರಥಮವಲ್ಲಿಯು ಸಮಾಪ್ತವಾಯಿತು.*

★ ★ ★

# ದ್ವಿತೀಯಾಧ್ಯಾಯ ದ್ವಿತೀಯವಲ್ಲೀ

**ದೇಹಾದೇಃ ಭಗವದಧೀನತ್ವಂ ಜ್ಞಾತ್ವಾ ಮಮತಾಂ ಜಹ್ಯಾತ್ ಇತಿ ಭಾವೇನ ತತ್ತ್ಯಾಗಿನಃ ಸೌಖ್ಯಮಾಹ- ಪುರಮಿತಿ ॥**

**ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ ।**
**ಅನುಷ್ಠಾಯ ನ ಶೋಚತಿ ವಿಮುಕ್ತಶ್ಚ ವಿಮುಚ್ಯತೇ ॥ ಏತದ್ವೈ ತತ್ ॥ 1 ॥**

**ಏಕಾದಶದ್ವಾರಂ ಶ್ರೋತ್ರದ್ವಯಂ ಚಕ್ಷುರ್ದ್ವಯಂ ನಾಸಾದ್ವಯಂ ಮುಖಂ ಪಾಯೂಪಸ್ಥೇ ಮನೋಬುದ್ಧೀ ಚೇತ್ಯೇಕಾದಶದ್ವಾರಂ ಪುರಂ ದೇಹಂ ಅವಕ್ರಚೇತಸೋಽಜಸ್ಯ ಭಗವತಃ ಸಂಬಂಧಿನಂ ತದಧೀನಮನುಷ್ಠಾಯ ಭಗವದಧೀನತಯಾ ನಿಶ್ಚಿತ್ಯ ಮಮತಾತ್ಯಾಗೀ ನ ಶೋಚತಿ । ಏವಂ ನಿಶ್ಚಯೇಽಪಿ ಕಥಂ ಶೋಕಾಭಾವ ಇತ್ಯತ ಉಕ್ತಂ- ವಿಮುಕ್ತಶ್ಚೇತಿ । ದೇಹಾಭಿಮಾನಾಭಾವೇನ ಪಾಮರವತ್ ತತ್- ಕೃತಕ್ಲೇಶಶೂನ್ಯತಯಾ ಪ್ರಾಗೇವ ವಿಮುಕ್ತೋಽಪರೋಕ್ಷಜ್ಞಾನೀ ದಗ್ಧಪಟಾಯಮಾನದೇಹಾದಿಮಾನ್ ಪ್ರಾರಬ್ಧಾವಸಾನೇ ನಿಶ್ಶೇಷತೋ ವಿಮುಚ್ಯತೇ । ಮುಖ್ಯವಿಮುಕ್ತಿಮಾನ್ ಭವತಿ । ಏತದ್ವೈ ತತ್ ತ್ವಯಾ ಪೃಷ್ಟಂ ತತ್ ಏತದ್ವೈ ದೇಹೇಂದ್ರಿಯಾದಿನೇತೃತ್ವಮುಕ್ತಿಪ್ರದತ್ವಗುಣಕಂ ವೈ ಇತಿ ॥ 1 ॥**

ನಚಿಕೇತನೇ ! ಮನುಷ್ಯನ ದೇಹ ಇಂದ್ರಿಯ ಮುಂತಾದವುಗಳೆಲ್ಲವೂ ಯಾವಾಗಲೂ ಪರಮಾತ್ಮನ ಅಧೀನ- ವಾಗಿವೆಯೆಂದು ತಿಳಿಯಬೇಕು. ಈ ತಿಳುವಳಿಕೆಯಿಂದ ದೇಹ ಮುಂತಾದವುಗಳಲ್ಲಿ ಮಮತೆಯು ಕಡಿಮೆಯಾಗುತ್ತದೆ. ಮಮತೆಯು ಕಡಿಮೆಯಾದರೆ ಹಾಗೂ ಮಮತೆಯನ್ನು ಬಿಟ್ಟರೆ ಆಗುವ ಸುಖವನ್ನು ವರ್ಣಿಸಲು ಸಾಧ್ಯವಿಲ್ಲ.

ಈ ದೇಹವು ಒಂದು ಪಟ್ಟಣವಿದ್ದಂತೆ ಇದೆ. ಈ ದೇಹವೆಂಬ ಪಟ್ಟಣಕ್ಕೆ ಹನ್ನೊಂದು ಬಾಗಿಲುಗಳು, ಎರಡು ಕಿವಿಗಳು, ಎರಡು ಕಣ್ಣುಗಳು, ಎರಡು ಮೂಗಿನ ಹೊಳ್ಳೆಗಳು, ಬಾಯಿ, ಗುದ (ಮಲವಿಸರ್ಜದ್ವಾರ), ಮತ್ತು ಗುಹ್ಯೇಂದ್ರಿಯ, ಮನಸ್ಸು ಹಾಗು ಬುದ್ಧಿ ಇವೇ ಹನ್ನೊಂದು ಬಾಗಿಲುಗಳು. ಇಂತಹ ಪಟ್ಟಣವು ಪರಮಾತ್ಮನದು. ಜೀವನು ಈಪಟ್ಟಣಕ್ಕೆ ಸ್ವಾಮಿಯಲ್ಲ. ಪರಮಾತ್ಮನ ಜ್ಞಾನವು ಯಾವಾಗಲೂ ಋಜುವಾಗಿರುವುದರಿಂದ ಅವನಗೆ ಅವಕ್ರಚೇತಸ್ ಎಂದು ಹೆಸರು. ಜೀವನ ಜ್ಞಾನವು ಅನೇಕಬಾರಿ ವಕ್ರದರವಾಗಿರುತ್ತದೆ. ತನ್ನದ್ದಲ್ಲದ ವಸ್ತುವನ್ನು ತನ್ನದೆಂದು ತಿಳಿಯುವುದೇ ವಕ್ರಬುದ್ಧಿ. ಹೀಗೆ ಪರಮಾತ್ಮನಗೆ ಅಧೀನವಾದ ದೇಹಾದಿಗಳನ್ನು ತನ್ನದೆಂದು ತಿಳಿಯುವುದರಿಂದ ಜೀವನು ವಕ್ರಬುದ್ಧಿಯುಳ್ಳವನೆಂದು ಸಿದ್ಧವಾಗುತ್ತದೆಯಲ್ಲವೇ ? ಇಂತಹ ವಕ್ರಬುದ್ಧಿಯು ಪರಮಾತ್ಮನಗಿಲ್ಲ. ಪರಮಾತ್ಮನು ಯಾವಾಗಲೂ ಋಜುಬುದ್ಧಿ-ಯುಳ್ಳವನು ! ಆದುದರಿಂದಲೇ ಸರ್ವಜ್ಞನು. ಹೀಗೆ ನಮಗೆ ತಿಳಿದುಬರುವ, ನಂಬಂಧಪಟ್ಟಿರುವ ಎಲ್ಲಾ ವಸ್ತುಗಳೂ, ಅವುಗಳನ್ನು ನಿರ್ಮಿಸಿದ ಪರಮಾತ್ಮನಗೆ ಸೇರಿದವುಗಳೆಂದು ದೃಢವಾಗಿ ತಿಳಿದರೆ ಮಮತೆಯು ಕಡಿಮೆಯಾಗುತ್ತದೆ. ಮಮತೆಯು ಕಡಿಮೆಯಾದಂತೆ ದುಃಖವು ಕಡಿಮೆಯಾಗುತ್ತದೆ. ದೇಹಾದಿಗಳಲ್ಲಿ ಅಭಿಮಾನನ್ನು ಬಿಟ್ಟವನಗೆ ಪಾಮರರಿಗೆ ಉಂಟಾಗುವಂತೆ ಕ್ಲೇಶಗಳು ಉಂಟಾಗುವುದಿಲ್ಲ. ಕ್ರಮೇಣ ಅಂತಹ ಜೀವನು ಅಪರೋಕ್ಷಜ್ಞಾನಿಯಾಗುತ್ತಾನೆ. ಪರಮಾತ್ಮ-ನನ್ನು ತನ್ನಲ್ಲಿ ಅಂತರ್ದೃಷ್ಟಿಯಿಂದ ತಿಳಿದುಕೊಳ್ಳುವುದೇ ಅಪರೋಕ್ಷಜ್ಞಾನವು. ಇಂತಹ ಜ್ಞಾನಿಗೆ ದೇಹ ಇಂದ್ರಿಯ ಮುಂತಾದವುಗಳು ಇದ್ದರೂ ಅವುಸುಟ್ಟ ಬಟ್ಟೆಯಂತೆ ತೋರಿಕೆಗೆ ಮಾತ್ರ ಇರುತ್ರವೆ. ನೇತುಹಾಕಿರುವ ಬಟ್ಟೆಯನ್ನು ಸುಟ್ಟರೆ ಬೂದೆಯಾಗಿದ್ದರೂ ಬಟ್ಟೆಯ ಆದಾರವು ಸ್ವಲ್ಪ ಸಮಯವಿರುತ್ತದೆ. ಆದರೆ ಅದರಿಂದ ಹಿಂದಿನಂತೆ ಉಪಯೋಗ ಮಾಡಿಕೊಳ್ಳಲಾಗುವುದಿಲ್ಲ. ಜ್ಞಾನಿಯ ದೇಹ-ಇಂದ್ರಿಯ ಮುಂತಾದವುಗಳೂ ಹೀಗೆಯೇ ಇರುತ್ತವೆ. ಇದನ್ನೇ ಶಾಸ್ತ್ರದಲ್ಲಿ ಜ್ಞಾನಿಯ ದೇಹಾದಿಗಳು ದಗ್ಧಪಟಾಯಮಾನವಾಗಿರುತ್ತವೆ ಎಂದು ಹೇಳುತ್ತಾರೆ. ಪ್ರಾರಬ್ಧಕರ್ಮವಿರುವವರೆಗೆ ಅಪರೋಕ್ಷ ಜ್ಞಾನಿಯು ದೇಹಾದಿಗಳನ್ನುಹೊಂದಿರುತ್ತಾನೆ. ಪ್ರಾರಬ್ಧಕರ್ಮವು ಸವೆದ ಕೂಡಲೇಅವನು ಸಂಪೂರ್ಣ ಮುಕ್ತಿಯನ್ನು ಪಡೆಯುತ್ತಾನೆ. ನಚಿಕೇತನೇ ! ಹೀಗೆ ಜೀವನ ದೇಹೇಂದ್ರಿಯಾದಿಗಳಿಗೆ ಸೃಷ್ಟಿಕರ್ತೃವಾಗಿ ಅವುಗಳಿಗೆ ಪ್ರೇರಕವಾಗಿರುವ ಪರಬ್ರಹ್ಮವೆಂಬುವ ಆಶ್ಚರ್ಯವಸ್ತುವು ಪರಮಲಾಭ ರೂಪವಾದ ಮುಕ್ತಿಯನ್ನು ಕೊಡುತ್ತದೆಂದು ತಿಳಿ ॥ 1 ॥

**ಹರೇರ್ಮಹಿಮಾಂತರಮಾಹ - ಹಂಸ ಇತಿ ।**

**ಹಂಸಃ ಶುಚಿಷತ್ ವಸುರಂತರಿಕ್ಷಸತ್**
**ಹೋತಾ ವೇದಿಷತ್ ಅತಿಥಿರ್ದುರೋಣಸತ್।**
**ನೃಷತ್ ವರಸತ್ ಋತಸತ್ ವ್ಯೋಮಸತ್**
**ಅಬ್ಜಾ ಗೋಜಾ ಋತಜಾ ಅದ್ರಿಜಾ ಋತಂ ಬೃಹತ್ ॥ 2 ॥**

**ಓಹಾಕ್ ತ್ಯಾಗ ಇತ್ಯಸ್ಮಾಡ್ಡಮುಪ್ರತ್ಯಯೇ ಟಿಲೋಪೇ ಹಂ ಇತಿ ರೂಪಮ್ । ಸಾರಪದಸ್ಯಾಂತ-ಲೋಪೇ ವಿಸರ್ಗೇ ಹ್ರಸ್ವೇ ಚ ಸ ಇತಿ ರೂಪಮ್ । ಹಂ ಚಾಸೌ ದೋಷಹೀನಶ್ಚಾಸೌ ಸಶ್ಚಸಾರ-ರೂಪಶ್ಚೇತಿ ಹಂಸಃ । ನಿತ್ಯಂ ಹೀನೋಽಖಿಲೈರ್ದೋಷೈಃ ಇತ್ಯಾದಿಸ್ಮೃತ್ಯಾ ನಿರುಕ್ತತ್ವೇನ ಯಥಾ-ಯೋಗಂ ಪ್ರಕೃತಿಪ್ರತ್ಯಯಾ ಊಹ್ಯಾಃ । ಶುಚೌ ವಾಯಾವಸ್ತೀತಿ ಶುಚಿಷದ್ ವಾಯುಸ್ಥಃ । ಶುಚಿ-ಶಬ್ದೋಪಪದಾದಸ್ತೇಃ ಶತೃಪ್ರತ್ಯಯೇ ಶ್ನಸೋರಲ್ಲೋಪ ಇತ್ಯಕಾರಲೋಪೇ ಷತ್ವೇ ಚ ಶುಚಿಷತ್ ಇತಿ**

ರೂಪಮ್ । ಏವಮಗ್ರೇऽಪಿ ಬೋಧ್ಯಮ್ । ವಂ ವರಂ ಸು ಸುಖಂ ಯಸ್ಯ ಸಃ ವಸುಃ ಪೂರ್ವಪದೇ ರಶಬ್ದಲೋಪಃ । ಅಂತರಿಕ್ಷಸತ್ ಅಂತರಿಕ್ಷಗಃ । ಹೋತಾ ಹು ದಾನಾದನಯೋರಿತ್ಯತಃ ಕರ್ತರಿ ತೃಚ್ । ಜುಹೋತಿ ಶಬ್ದಾದಿವಿಷಯಾನತ್ತಿ ಅನುಭವತೀತಿ ಇಂದ್ರಿಯಾದಿಸ್ಥಃ । ವೇದ್ಯಾಂ ಪೂಜ್ಯತಯಾऽಸ್ತೀತಿ ವೇದಿಷತ್ । ಅತಿ ಅತಿಶಯಿತಂ ಥಮನ್ನಂ ಯಸ್ಯ ಸೋऽತಿಥಿಃ ಸ ಏವಾತಿಥಿಃ । ಸೋಮರಸಪಾತ್ರೇ ದ್ರೋಣಕಲಶೇ ತಿಷ್ಠತೀತಿ ದುರೋಣಸತ್ । ನೃಷ್ವಸ್ತೀತಿ ನೃಷತ್ । ವರೇಷು ಬ್ರಹ್ಮಾದಿದೇವೇಷು ಅಸ್ತೀತಿ ವರಸತ್ । ಋತೇ ಯಥಾರ್ಥರೂಪೇ ವೇದೇ ಅಸ್ತೀತಿ ಋತಸತ್ । ವ್ಯೋಮಸತ್ ಪ್ರಕೃತಿಸ್ಥಃ । ವ್ಯೋತಮಸ್ಯಾಂ ಜಗದಿತಿ ಜಗದಾಧಾರಭೂತಾ ಶ್ರೀಃ ವ್ಯೋಮೇತ್ಯುಚ್ಯತೇ । ವಿಪುರ್ವಾದ್ದೂಯೀ ತಂತುಸಂತಾನ ಇತಿ ಧಾತೋರಧಿಕರಣೇ ಮನ್‌ಪ್ರತ್ಯಯೇ ಗುಣೇ ಅಂತಲೋಪೇ ವ್ಯೋಮೇತಿ ಸಿದ್ಧೇಃ । ಅಪ್ಸು ಜಾಯಂತ ಇತ್ಯಜ್ಞಾನಿ ತೇಷ್ವಾಸ್ತ ಇತ್ಯಬ್ಜಾಃ । ಅಬ್ಜಶಬ್ದೋಪಪದಾದಾಸ್ತೇಃ ಕ್ವಿಪ್-ಪ್ರತ್ಯಯೇ ಸಕಾರಸ್ಯ ರುತ್ವೇ ವಿಸರ್ಗೇ ಸವರ್ಣಧೀರ್ಘೇ ಚ ಅಬ್ಜಾ ಇತಿ ಭವತಿ । ಏವಮಗ್ರೇऽಪಿ । ಗೋಜಾಃ ಗೋಷು ಜಾತೇಷ್ವಾಸ್ತ ಇತಿ ಗೋಜಾಃ । ಋತೇಷು ಭಗವಂತಂ ಪ್ರಾಪ್ತೇಷು, ಮುಕ್ತೇಷ್ವಿತಿ ಯಾವತ್, ತೇಷು ಜಾತಾನಿ ಜ್ಞಾನಾದೀನಿ ತತ್ರಾಸ್ತ ಇತಿ ಋತಜಾಃ । ಅದ್ರಿಷು ಜಾತೇಷು ಆಸ್ತ ಇತ್ಯದ್ರಿಜಾಃ । ಋತಂ ಮುಖ್ಯತೋ ವೇದಪ್ರತಿಪಾದ್ಯಮ್ । ಪೂರ್ಣಗುಣತ್ವಾದ್ ಬೃಹತ್ । ಏತದ್ವೈ ತದಿತಿ ಅತ್ರ ಉತ್ತರತ್ರ ಚಾನುಷಂಜನೀಯಮ್ ॥ 2 ॥

ಈ ಮಂತ್ರದಲ್ಲಿ ಅನೇಕ ನಾಮಪದಗಳ ಮೂಲಕ ಪರಮಾತ್ಮನ ಅನೇಕ ಮಹಿಮೆಗಳನ್ನು ಹೇಳುತ್ತಿದ್ದಾರೆ.

1) ಹಂಸಃ = ಪರಮಾತ್ಮನು ಹಂಸ ಎಂಬ ಹೆಸರುಳ್ಳವನು. ಹಂ = ದೋಷಹೀನ, ಸ = ಸಾರರೂಪ, (ಉತ್ಕೃಷ್ಟ) ನಿತ್ಯದಲ್ಲಿಯೂ ದೋಷರಹಿತನಾಗಿ ಗುಣಗಳಿಂದ ಉತ್ಕೃಷ್ಟನಾಗಿರುವುದರಿಂದ ಪರಮಾತ್ಮನಿಗೆ ಹಂಸ ಎಂದು ಹೆಸರು.

2) ಶುಚಿಷಿತ್, ಶುಚಿ = ಮುಖ್ಯಪ್ರಾಣ, ಆ ಮುಖ್ಯಪ್ರಾಣನಲ್ಲಿ ಯಾವಾಗಲೂ ವಿಶೇಷ ಸನ್ನಿಧಾನವಿಟ್ಟಿರು-ವುದರಿಂದ ಅವನಿಗೆ ಶುಚಿಷತ್ ಎಂದು ಹೆಸರು.

3) ವಸುಃ, ವ ಎಂದರೆ ವರ, ಎಂದರೆ ಶ್ರೇಷ್ಠ ಎಂದರ್ಥ, ವ – ಶ್ರೇಷ್ಠವಾದ, ಸು = ಸುಖವು ಯಾರಿಗೆ ಇದೆಯೋ ಅವನು ವಸು ಎನ್ನಿಸಿಕೊಳ್ಳುತ್ತಾನೆ.

4) ಅಂತರಿಕ್ಷಸತ್ = ಅಂತರಿಕ್ಷದಲ್ಲಿಯೂ ಇರುವುದರಿಂದ ಅವನಿಗೆ ಪರಬ್ರಹ್ಮನಿಗೆ ಅಂತರಿಕ್ಷಸತ್ ಎಂದು ಹೆಸರು.

5) ಹೋತಾ = ಜೀವರ ಇಂದ್ರಿಯಗಳಲ್ಲಿದ್ದು ಅವುಗಳಿಗೆ ರಸಶಬ್ದರೂಪ ಮುಂತಾದ ವಿಷಯಗಳನ್ನು ಒದಗಿಸಿ, ತಾನು ಸಾರರೂಪವಾದ ಸ್ವ ಸ್ವರೂಪಾತ್ಮಕವಾದ ವಿಷಯಗಳನ್ನು ಅನುಭವಿಸುವುದರಿಂದ ಆ ಪರಬ್ರಹ್ಮನಿಗೆ ಹೋತಾ ಎಂದು ಹೆಸರು.

6) ವೇದಿಷತ್ = ಯಾಗದ ವೇದಿಯಲ್ಲಿ ವಿಶೇಷ ಪೂಜೆಯನ್ನು ಕೈಗೊಂಡು ಇರುವವನಾದುದರಿಂದ ವೇದಿಷತ್.

7) ಅತಿಥಿ = ಅತಿ ಅಂದರೆ ಬಹಳವಾದ ಥ ಎಂದರೆ (ಅನ್ನ) ಭೋಗ್ಯವಾದ ವಸ್ತು ಸಮೂಹವುಳ್ಳವನು.

8) ದುರೋಣಸತ್ = ದ್ರೋಣಕಲಶವೆಂಬ ಹೆಸರುಳ್ಳ ಸೋಮರಸದ ಪಾತ್ರೆಯಲ್ಲಿ ವಿಶೇಷ ಸನ್ನಿಧಾನವಿಟ್ಟಿರುವವನು.

9) ನೃಷತ್ = ಎಲ್ಲಾ ಮನುಷ್ಯಾದಿಜೀವರಲ್ಲಿ ನಿಯಾಮಕನಾಗಿರುವವನು.

10) ವರಸತ್ = ಶ್ರೇಷ್ಠರಾದ ಬ್ರಹ್ಮಾದಿ ದೇವತೆಗಳಲ್ಲಿ ವಿಶೇಷ ಸನ್ನಿಧಾನವಿಟ್ಟಿರುವವನು.

11) ಋತಸತ್ = ಋತ ಎಂದರೆ ಯಥಾರ್ಥರೂಪವಾದ ವೇದ ಅದರಲ್ಲಿ ಪ್ರತಿಪಾದ್ಯನಾಗಿರುವುದರಿಂದ ಋತಸತ್ ಎಂದು ಪರಬ್ರಹ್ಮನಿಗೆ ಹೆಸರು.

12) ವ್ಯೋಮಸತ್ = ಜಗತ್ತಿಗೆ ಆಧಾರವಾದ ರಮಾದೇವಿಗೆ ವ್ಯೋಮ ಎಂದು ಹೆಸರು. ಅವಳಲ್ಲಿ ವಿಶೇಷ ಸನ್ನಿಧಾನವನಿಟ್ಟು ನಿಯಾಮಕನಾಗಿರುವವನು.

13) ಅಬ್ಜಾಃ - ನೀರಿನಲ್ಲಿ ಹುಟ್ಟಿರುವ ವಸ್ತುಗಳಲ್ಲಿ (ಮುತ್ತು ರತ್ನ ಮುಂತಾದವುಗಳಲ್ಲಿ) ವಿಶೇಷ ಸನ್ನಿಧಾನವಿಟ್ಟು ಅವುಗಳಿಗೆ ಶ್ರೇಷ್ಠತೆಯನ್ನು ಕೊಡುವವನು.

14) ಗೋಜಾಃ = ಭೂಮಿಯಲ್ಲಿ ಹುಟ್ಟಿರುವ ವಸ್ತುಗಳಲ್ಲಿರುವವನು.

15) ಋತಜಾಃ = ಪರಮಾತ್ಮನನ್ನು ಹೊಂದಿ ಮುಕ್ತರಾದವರಲ್ಲಿಯೂ ಅವರ ಜ್ಞಾನಾದಿಗಳಲ್ಲಿಯೂ ನಿಯಾಮಕನಾಗಿ ಇರುವವನು.

16) ಅದ್ರಿಜಾಃ = ಪರ್ವತದಲ್ಲಿ ಹುಟ್ಟಿದ ವಸ್ತುಗಳಲ್ಲಿರುವವನು.

17) ಋತಂ = ವೇದಗಳಿಂದ ಮುಖ್ಯಪ್ರತಿಪಾದ್ಯ.

18) ಬೃಹತ್ = ಸಮಸ್ತ ಗುಣಗಳಿಂದ ಪೂರ್ಣವಾದುದು.

ಎಲೈ ನಚಿಕೇತನೇ, ಪರಬ್ರಹ್ಮವು ಇಂತಹ ಅನಂತಾನಂತಗುಣಗಳಿಂದ ಪರಿಪೂರ್ಣವಾಗಿದೆಯೆಂದು ತಿಳಿ.

**ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತೀತ್ಯುಕ್ತೋ ಜೀವ ಇತಿ ಚೋದ್ಯಂ ಈಶಾನ ಇತ್ಯುತ್ತರಾರ್ಧೇ ನಿರಂಕುಶಭೂತಭವ್ಯಸರ್ವಪ್ರೇರಕತ್ವ ಭಗವಲ್ಲಿಂಗೇನ ನಿರಸ್ತಂ ಪ್ರಾಕ್ । ಅಧುನಾ ಅಂಗುಷ್ಠಮಾತ್ರತಯಾ ಮಧ್ಯೇ ಸ್ಥಿತಸ್ಯ ವ್ಯಾಪಾರವಿಶೇಷಂ ವದನ್ನೇವ ನಿರವಕಾಶವಾಮನಶ್ರುತ್ಯಾದಿನಾ ಚ ಜೀವ ಇತಿ ಚೋದ್ಯಂ ನಿರಾಹ- ಊರ್ಧ್ವಮಿತಿ ।**

**ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ ।**
**ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ ॥ 3 ॥**

**ಯತ್ತಚ್ಛಬ್ದಾವತ್ರ ಗ್ರಾಹ್ಯೌ । ಯೋಽಂಗುಷ್ಠಮಾತ್ರತ್ವಾದಿನಾ ಪ್ರಾಗುಕ್ತಃ ಪ್ರಾಣಂ ಪ್ರಾಣವಾಯುಂ ಊರ್ಧ್ವಮುನ್ನಯತಿ ಊರ್ಧ್ವಗತಿಮತ್ತಯಾ ಪ್ರೇರಯತಿ । ಅಪಾನಂ ಚ ವಾಯುಂ ಪ್ರತ್ಯಗಧಃ ವಿಣ್‌ಮೂತ್ರಾದಿನಿಷ್ಕಾಸನಹೇತುತಯಾ ಅಸ್ಯತಿ ಪ್ರೇರಯತಿ । ತಂ ಮಧ್ಯೇ ಹೃದಿ ಆಸೀನಂ ವಾಮನಂ ವಿಶ್ವೇ**

**ಸರ್ವೇ ದೇವಾಃ ಉಪಾಸತ ಇತಿ । ಏತೇನ ಪ್ರಾಣಾಪಾನಪ್ರೇರಕತ್ವಲಿಂಗೇನ ಪ್ರಾಗುಕ್ತಈಶಾನೋ ಮುಖ್ಯಪ್ರಾಣ ಇತ್ಯಪಿ ಚೋದ್ಯಂ ನಿರಸ್ತಮ್ । ನಿರವಕಾಶವಾಮನಶ್ರುತ್ಯಾದೇಃ ಸ್ವಪ್ರೇರಕಹರೌ ಶತೇ ಪಂಚಾಶನ್‌ನ್ಯಾಯೇನ ಪ್ರಾಣಾಪಾನಪ್ರೇರಕತ್ವಸ್ಯಾಪಿ ಸಂಭವಾತ್ । ತಥಾ ಚ ಸೂತ್ರಂ 'ಶಬ್ದಾದೇವ ಪ್ರಮಿತಃ' (ಬ್ರ. ಸೂ. 1-3-24) ಇತಿ ॥ 3 ॥**

ಜೀವರ ಹೆಬ್ಬೆರಳಿನ ಗಾತ್ರದ ಒಬ್ಬ ಪುರುಷ ಅಂದರೆ ಚೇತನನು ಹೃದಯಗುಹೆಯಲ್ಲಿದ್ದಾನೆ ಎಂದು ಹೇಳಿದೆ. ಆದರೆ ಆ ಪುರುಷನು ಜೀವನೇ ಆಗಿರಬಾರದೇಕೆ ಎಂಬ ಪ್ರಶ್ನೆಯು ಉದ್ಭವಿಸಬಹುದು. ಆದರೆ ಯಾರ ಅಂಕುಶಕ್ಕೊಳಪಡದೆ ಭೂತಭವಿಷ್ಯತ್ ಮತ್ತು ವರ್ತಮಾನ ಕಾಲದಲ್ಲಿರುವ ಸಮಸ್ತ ವಸ್ತುಗಳಿಗೂ ಪ್ರೇರಕನಾಗಿರುವವನೇ ಜೀವರ ಹೃದಯ-ಗುಹೆಯಲ್ಲಿ ಪ್ರೇರಕನಾಗಿರುತ್ತಾನೆ, ಎಂದು ಹೇಳಿದ್ದರಿಂದ ಜೀವಾಂತರ್ಯಾಮಿಯಾದ ಪ್ರೇರಕಚೇತನನು ಜೀವನಲ್ಲವೆಂದು ಸುಲಭವಾಗಿಯೇ ತಿಳಿಯಬಹುದಲ್ಲವೇ ?

ಇನ್ನೊಂದು ಕಾರಣದಿಂದಲೂ ಜೀವನ ಹೃದಯಗುಹೆಯಲ್ಲಿರುವ ಪ್ರೇರಕನು ಜೀವನಲ್ಲವೆಂದು ತಿಳಿಯಬೇಕು. ತನಗೆ ತಾನೇ ಪ್ರೇರಕನೆಂಬ ಮಾತು ವಿರುದ್ಧವಲ್ಲವೆ ? ನಚಿಕೇತನೇ ! ಜೀವರ ಹೃದಯಗುಹೆಯಲ್ಲಿ ಅಂಗುಷ್ಠ ಪರಿಮಾಣನಾಗಿರುವ ಚೇತನನು ಪ್ರಾಣವಾಯುವನ್ನು ಮೇಲಕ್ಕೆ ಹೋಗುವಂತೇ ಪ್ರೇರಿಸುತ್ತಾನೆ. ಅಪಾನವಾಯುವನ್ನು ಕೆಳಕ್ಕೆ ಪ್ರೇರಿಸಿ, ಮಲಮೂತ್ರಾದಿ ಕಶ್ಮಲಗಳನ್ನು ಹೊರಪಡಿಸಿ ಈ ಜೀವನ ದೇಹವನ್ನು ಕಾಪಾಡುತ್ತಾನೆ. ಈ ಎರಡು ವಾಯುಗಳ ಪ್ರೇರಕನು ಹೃದಯ ಮಧ್ಯದಲ್ಲಿ ಸುಖಾಸೀನನಾಗಿರುತ್ರಾನೆ. ಅವನಿಗೆ ವಾಮನ ಎಂದು ಹೆಸರು. ಅವನನ್ನು ಎಲ್ಲಾ ದೇವತೆಗಳೂ ಉಪಾಸನೆ ಮಾಡುತ್ತಾರೆ. ಪ್ರಾಣನಾಗಲಾರನು ಏಕೆಂದರೆ ಮುಖ್ಯಪ್ರಾಣನಿಗೂ ವಾಮನ ಎಂಬ ಹೆಸರು ಪ್ರಸಿದ್ಧವಾಗಿಲ್ಲ. ಶ್ರೀಹರಿಯು ಸರ್ವಪ್ರೇರಕನಾದುದರಿಂದ ನೂರರಲ್ಲಿ ಐವತ್ತು ಇದ್ದೇ ಇದೆ. (ಶತೇ ಪಂಚಾಶದಸ್ತಿ) ಎಂಬ ಶತೇ ಪಂಚಾಶನ್ನ್ಯಾಯದಿಂದ ಪ್ರಾಣಾಪಾನಗಳಿಗೂ ಶ್ರೀಹರಿಯು ಪ್ರೇರಕನಾಗುತ್ತಾನೆ ಎಂಬ ಮಾತು ಸರಿಹೊಂದುತ್ತದೆ.★

**ಕಾಂಶ್ಚಿದ್ಭಗವದ್ಗುಣಾನುಕ್ತ್ವಾ ತೂಷ್ಣೀಂ ಸ್ಥಿತಂ ಯಮಂ ಪುನಸ್ತದ್ಗುಣಾನ್ ವಕ್ತುಂ ಪೃಚ್ಛತಿ ನಚಿಕೇತಾಃ ಅಸ್ಯೇತಿ ।**

ಹೀಗೆ ಭಗವಂತನ ಗುಣಗಳನ್ನು ಹೇಳಿ ಸುಮ್ಮನೆ ನಿಂತಿದ್ದ ಯಮನನ್ನು ಕುರಿತು ನಚಿಕೇತನು ಇನ್ನೂ ಪರಮಾತ್ಮನ ಗುಣಗಳನ್ನು ಹೇಳು ಎಂದನು.

**ಅಸ್ಯ ವಿಸ್ರಂಸಮಾನಸ್ಯ ಶರೀರಸ್ಥಸ್ಯ ದೇಹಿನಃ ।**
**ದೇಹಾದ್ವಿಮುಚ್ಯಮಾನಸ್ಯ ಕಿಮತ್ರ ಪರಿಶಿಷ್ಯತೇ । ಏತದ್ವೈ ತತ್ ॥ 4 ॥**

---

★ ಓಂ ಶಬ್ದಾದೇವ ಪ್ರಮಿತಃ ಓಂ, ಬ್ರ. ಸೂ. ಪ್ರ. ಅ. ತೃ. ಪಾದ ಅಧಿ. 7, ಸೂ 27. ಈಶಾನೋ ಭೂತಭವ್ಯಸ್ಯ (ಕಾಠಕ ಅ 2. ವಲ್ಲಿ 1. ಮಂತ್ರ 12) ಎಂಬಲ್ಲಿ ಹೇಳಿರುವ ಈಶಾನನು ವಿಷ್ಣುವೇ ಆಗಿರುತ್ತಾನೆ. ಏಕೆಂದರೆ ಪ್ರಾಣಾಪಾನ ಪ್ರೇರಕನಾಗಿ ಮಧ್ಯದಲ್ಲಿರುವವನು ವಾಮನನು ಮಧ್ಯೇವಾಮನಮಾಸೀನಂ ವಿಶ್ವೇದೇವಾ ಉಪಾಸತೇ (ಕಾ. 2.2.3) ಎಂಬ ಕಾಠಕ-ಶ್ರುತಿಯಲ್ಲಿ ಹೇಳಿದೆ ಎಂದು ಸೂತ್ರಾರ್ಥ ॥

**ಶರೀರಸ್ಥಸ್ಯ ಅಸ್ಯ ದೇಹಿನೋ ಜೀವಸ್ಯ ವಿಸ್ರಂಸಮಾನಸ್ಯ ಸ್ಥೂಲಂ ದೇಹಂ ತ್ಯಜತಃ, ದೇಹಾತ್ ಸೂಕ್ಷ್ಮದೇಹಾತ್ ವಿಮುಚ್ಯ ಮಾನಸ್ಯ ತದಪಿ ತ್ಯಜತಃ । ಅತ್ರ ಮುಕ್ತೌ । ನಿಯಾಮಕಂ ಕಿಂ ಕೀದೃಶಂ ಪರಿಶಿಷ್ಯತ ಇತಿ ಪ್ರಶ್ನಃ । ಉತ್ತರಮಾಹ- ಏತದ್ವೈ ತದಿತಿ । ತ್ವಯಾ ಪೃಷ್ಟಂ ತದ್ವಸ್ತು ಏತದ್ವೈ ವಕ್ಷ್ಯಮಾಣ-ಗುಣಕತಯಾ ಪರಿಶಿಷ್ಯಮಾಣಂ ವೈ ಇತ್ಯರ್ಥಃ ॥ 4 ॥**

ಗುರುವೇ ! ಈ ಜೀವನು ಶರೀರವೆಂಬ ಮನೆಯಲ್ಲಿ ವಾಸವಾಗಿರುತ್ತಾನಷ್ಟೆ? ನಿನ್ನ ಅಪ್ಪಣೆ ಬಂದೊದಗಿದಾಗ ಈ ಸ್ಥೂಲದೇಹವನ್ನು ಬಿಟ್ಟು ಅವನು ಹೊರಡುತ್ತಾನೆ. ಹಾಗೆಯೇ ಪರಿಪಕ್ವ ಜ್ಞಾನಭಕ್ತಿಗಳಿಂದ ಭಗವಂತನ ಅಪರೋಕ್ಷ-ಜ್ಞಾನವಾದಾಗ ಸೂಕ್ಷ್ಮ ಶರೀರವನ್ನು ಬಿಟ್ಟು ಪರಮಾತ್ಮನ ಸನ್ನಿಧಿಗೆ ತೆರಳುತ್ತಾನೆ. ಈ ಸಾಧಾರಣಮರಣ ಮತ್ತು ವಿಶೇಷ ಮರಣರೂಪವಾದ ಮುಕ್ತಿಗಳಲ್ಲಿ ಜೀವನನ್ನು ಆಳುವವರು ಹೇಗೆ ಇರುತ್ತಾರೆ ? ಅದನ್ನು ತಿಳಿಸಬೇಕು.

ಯಮ :- ಹೌದು, ನಿಯಾಮಕನು ಇರುತ್ತಾನೆ. ಅವನಲ್ಲಿ ತಾನು ಹೇಳುವ ಮುಂದಿನ ಗುಣಗಳಿರುತ್ತವೆಯೆಂದು ತಿಳಿದುಕೋ.

**ಸರ್ವಜೀವನಹೇತ್ವೋಃ ಮುಖ್ಯವಾಯುರೂಪಯೋರಪಿ ಪ್ರೇರಕತ್ವಗುಣಂ ಪರಿಶಿಷ್ಯಮಾಣ-ಸ್ಯಾಹ- ನೇತಿ ।**

**ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ ।**
**ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ॥ 5 ॥**

**ಮುಖ್ಯಪ್ರಾಣರೂಪಾಭ್ಯಾಂ ಪ್ರಾಣಾಪಾನಾಭ್ಯಾಂ ನ ಜೀವತಿ ಚೇತನರಾಶಿಃ, ಕಿಂತು ಇತರೇಣ । ಸ ಕಃ ? ಯಸ್ಮಿನ್ನೇತೌ ಪ್ರಾಣಾಪಾನೌ ಉಪಾಶ್ರಿತೌ ತೇನೇತರೇಣೇತಿ ಭಗವತ್ಪ್ರೇರಿತಾಭ್ಯಾಂ ಏತಾಭ್ಯಾಂ ಜೀವತಿ । ನ ಸ್ವತಂತ್ರಾಭ್ಯಾಮಿತಿ ಯಾವತ್ । ಏತದ್ವೈ ತದಿತಿ ಪೂರ್ವೇಣಾನ್ವಯಃ । ಸರ್ವಜೀವನದಮುಖ್ಯಪ್ರಾಣಪ್ರೇರಕತ್ವಗುಣಯುಕ್ತಂ ವೈ ತದಿತಿ ॥ 5 ॥**

ಅಯ್ಯಾ ನಚಿಕೇತನೇ ! ಎಲ್ಲರ ಜೀವನಕ್ಕೂ ಮುಖ್ಯ ಕಾರಣರು-ಪ್ರಾಣ ಅಪಾನಗಳೆಂಬ ಮುಖ್ಯಪ್ರಾಣನ ಎರಡು ರೂಪಗಳು. ಅವುಗಳನ್ನು ಪ್ರೇರಿಸುವವನೂ ನಾರಾಯಣನೇ. ಮುಖ್ಯಪ್ರಾಣನ ಪ್ರಾಣ ಅಪಾನಗಳೆಂಬ ಎರಡು ರೂಪಗಳಿಂದಲೇ ಯಾವ ಚೇತನನೂ ಜೀವಿಸುವುದಿಲ್ಲ – ಏಕೆಂದರೆ ಪ್ರಾಣಾಪಾನರು ಸ್ವತಂತ್ರರಲ್ಲ, ಆದರೆ ಈ ಪ್ರಾಣಾಪಾನರು ಯಾವ ಒಬ್ಬ ಪರಮ ಚೇತನನನ್ನು ಆಶ್ರಯಿಸುತ್ತಾರೋ ಅವನ ಪ್ರೇರಣೆಯಿಂದಲೇ ಪರತಂತ್ರರಾದ ಪ್ರಾಣಾಪಾನರು ಎಲ್ಲಾ ಚೇತನರನ್ನು ಜೀವಿಸಿರುವಂತೆ ಮಾಡುತ್ತಾರೆ. ಹೀಗೆ ಸರ್ವರಿಗೂ ಜೀವನಪ್ರದನಾದ ಮುಖ್ಯ-ಪ್ರಾಣನಿಗೂ ಪ್ರೇರಕನಾದ ಹರಿಯು ಮೃತಜೀವರಿಗೂ ಮುಕ್ತಜೀವರಿಗೂ ಪ್ರೇರಕನೆಂದು ತಿಳಿ. ॥ 5 ॥

**ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ ।**
**ಯಥಾ ಮರಣಂ ಪ್ರಾಪ್ಯಾತ್ಮಾ ಭವತಿ ಗೌತಮ ॥ 6 ॥**

**ಹಂತ ತ ಇತಿ ಪ್ರತಿಜ್ಞಾವಾಕ್ಯದ್ವಯಂ ಸ್ವಪ್ನಾಂತಮಿತಿ ಮಂತ್ರಾತ್ ಪ್ರಾಗೇವಾಕೃಷ್ಯ ವ್ಯಾಖ್ಯಾತಮ್ । ॥ 6 ॥**

ಈ ಮಂತ್ರ ಅರ್ಥವನ್ನು ಸ್ವಪ್ನಾಂತಂ ಎಂಬ ಮಂತ್ರಕ್ಕಿಂತ (ಕಾ. 2, ಅ. 1, ವಲ್ಲಿ 4) ಹಿಂದೆಯೇವಿವರಿಸಲಾಗಿದೆ.

**ತತ್ರ ಬ್ರಹ್ಮಗುಣಾನ್ ಇಯತಾ ನಿರೂಪ್ಯೋತ್ತರತ್ರಾಪಿ ಜೀವಭೇದಕಗುಣಾನ್ ಬ್ರಹ್ಮಣೋ ವಿವಕ್ಷುರಿತರೇಣೇತಿ ಪೂರ್ವಮಂತ್ರೇ ಭೇದಸ್ಯ ಪ್ರಸ್ತುತತ್ವಾತ್ ತತ್ ಪ್ರಕಟನಾಯ ಮರಣಂ ಪ್ರಾಪ್ಯ ಆತ್ಮಾ ಜೀವೋ ಯಥಾ ಭವತಿ ತಚ್ಚ ವಕ್ಷ್ಯಾಮೀತ್ಯುಕ್ತಮ್ । ಬ್ರಹ್ಮಣ್ಯಯುಕ್ತಂ ಧರ್ಮಂ ಜೀವಸ್ಯಾಹ ಯೋನಿಮಿತಿ ।**

**ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ।**
**ಸ್ಥಾಣುಮನ್ಯೇಽನುಸಂಯಂತಿ ಯಥಾಕರ್ಮ ಯಥಾಶ್ರುತಮ್ ॥ 7 ॥**

ಇದುವರೆಗೆ ಪರಬ್ರಹ್ಮನ ಗುಣಗಳನ್ನು ನಿರೂಪಿಸಿದ್ದಾಯಿತು. ಇನ್ನು ಮುಂದೆಯೂ ಪರಬ್ರಹ್ಮನಿಗೆ ಜೀವನಿಗಿಂತ ಭೇದವನ್ನು ತೋರಿಸತಕ್ಕಗುಣಗಳನ್ನು ಹೇಳುತ್ತೇನೆ. ಪರಬ್ರಹ್ಮನು ಜೀವನಿಗಿಂತ ಇತರ (ಭಿನ್ನ)ನೆಂದು ಇತರೇಣ ತು ಜೀವಂತಿ (3–3–5) ಎಂಬಲ್ಲಿ ಹೇಳಿದ್ದೇನೆ. ಅದನ್ನು ಸ್ಪಷ್ಟಪಡಿಸುತ್ತೇನೆ. ಜೀವನು ಮರಣಹೊಂದಿದ ಮೇಲೆ ಅವನಿಗೆ ಉಂಟಾಗುವ ಅವಸ್ಥೆಗಳು ಬ್ರಹ್ಮನಿಗೆ ಉಂಟಾಗುವುದಿಲ್ಲ. ಇದರಿಂದ ಬ್ರಹ್ಮನು ಜೀವನಿಗಿಂತ ಬೇರೆಯೆಂದು ತಿಳಿಯಬಹುದು.

**ದೇಹಿನೋ ದೇಹಧಾರಣಯೋಗ್ಯಾಃ ಅನ್ಯೇ ಕೇಚನ ಜೀವಾಃ ಶರೀರತ್ವಾಯ, ಅರ್ಶಆದ್ಯಚ್ ಪ್ರತ್ಯಯಾಂತಾತ್ ತ್ವಪ್ರತ್ಯಯಃ, ಶರೀರವತ್ವಾಯ ಯೋನಿಂ ಪ್ರಪದ್ಯಂತೇ ಪ್ರಾಪ್ನುವಂತಿ । ಕಥಂ ? ಯಥಾಕರ್ಮ ಯಥಾಶ್ರುತಂ, ಸ್ವಸ್ವವಿದ್ಯಾಕರ್ಮಾನತಿಕ್ರಮೇಣ । ಅನ್ಯೇ ದೇಹಿನಃ ಸ್ಥಾಣುಂ ಸ್ಥಾವರಂ ದೇಹಂ ಸಂಯಂತಿ ಸ್ವಕೀಯಕರ್ಮಾದ್ಯನುಸಾರೇಣೇತಿ ॥ 7 ॥**

ಮೃತರಾದವರಲ್ಲಿ ಯಾರಿಗೆ ಪುನಃ ದೇಹವು ಬರಬೇಕಾಗಿದೆಯೋ ಅಂತಹವರು ಶರೀರ ಪ್ರಾಪ್ತಿಗೋಸ್ಕರ ಬೇರೆ ಬೇರೆ ಯೋನಿಗಳಲ್ಲಿ ಹುಟ್ಟುತ್ತಾರೆ. ಅವರವರ ವಿದ್ಯೆ (ಜ್ಞಾನ) ಮತ್ತು ಕರ್ಮಗಳಿಗನುಸಾರವಾಗಿ ಸೂಕ್ಷ್ಮಕ್ರಿಮಿಗಳು ಮುಂತಾದವು-ಗಳಿಂದ ಆರಂಭಿಸಿ, ಮನುಷ್ಯ, ದೇವತೆ ಇತ್ಯಾದಿ ಶರೀರಗಳನ್ನು ಹೊಂದುತ್ತಾರೆ. ಕೆಲವು ಜೀವರು ತಮ್ಮ ಕರ್ಮಾ-ನುಸಾರವಾಗಿ ಗಿಡ ಮರ ಬಳ್ಳಿ ಬಂಡೆಗಳಾಗಿಯೂ ಹುಟ್ಟುತ್ತಾರೆ, ಇಂತಹ ಜನ್ಮವು ಪರಮಾತ್ಮನಿಗೆ ಸರ್ವಥಾ ಇಲ್ಲ, ಆದುದರಿಂದಲೇ ಅವನು ಜೀವರಿಗಿಂತ ಸರ್ವಥಾ ಭಿನ್ನನು. ॥ 7 ॥

**ಜೀವಭೇದಕಗುಣಯುಕ್ತತ್ವೇನ ಭಗವತೋ ಮಹಿಮಾನಮಾಹ- ಯ ಏಷ ಇತಿ ।**

ಯಮ :- ಎಲೈ ನಚಿಕೇತನೆ, ಜೀವನಿಗಿಂತ ಪರಮಾತ್ಮನು ಭಿನ್ನನು ಎಂಬ ವಿಷಯದಲ್ಲಿ ಆ ಪರಮಾತ್ಮನ ಗುಣಗಳೇ ಸಾಕ್ಷಿಯಾಗಿವೆ – ಕೇಳು.

**ಯ ಏಷು ಸುಪ್ತೇಷು ಜಾಗರ್ತಿ**
**ಕಾಮಂ ಕಾಮಂ ಪುರುಷೋ ನಿರ್ಮಮಾಣಃ ।**

ತದೇವ ಶುಕ್ರಂ ತದ್ ಬ್ರಹ್ಮ ತದೇವಾಮೃತಮುಚ್ಯತೇ
ತಸ್ಮಿಂಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ ॥
ಏತದ್ವೈ ತತ್ ॥ 8 ॥

ಯ ಏಷ ಪುರುಷೋ ಭಗವಾನ್ ಸುಪ್ತೇಷು ಜೀವೇಷು ಕಾಮಂ ಕಾಮಂ ಸ್ವೇಚ್ಛಾನುಸಾರೇಣೇತಿ ವಾ ಕಾಮ್ಯಮಾನಂ ಸ್ವಾಪ್ನಪದಾರ್ಥಜಾತಮಿತಿ ವಾಽರ್ಥಃ, ನಿರ್ಮಮಾಣಃ ಉತ್ಪಾದಯನ್ ಜಾಗರ್ತಿ । ತದಾಹ ಸೂತ್ರೇ 'ನಿರ್ಮಾತಾರಂ ಚೈಕೇ ಪುತ್ರಾದಯಾಶ್ಚ' (ಬ್ರ.ಸೂ. 3-2-2) ಇತಿ । ತದೇವೇತಿ ವಿಧೇಯಾಪೇಕ್ಷಯಾ ನಪುಂಸಕತ್ವಮ್ । ಶುಕ್ರಂ ಶೋಕರಹಿತಂ ತದ್ಬ್ರಹ್ಮತದೇವಾಮೃತಮನಶ್ವರಮುಚ್ಯತೇ । ವೇದಾದಿಷು ಪ್ರಾಜ್ಞೈರಿತಿ ವಾ । ತಸ್ಮಿನ್ನಿತಿ ಮಹಿಮಾಂತರಮ್ । ಏತದ್ವೈ ತತ್ ತ್ವಯಾ ಪೃಷ್ಟಂ ತತ್ ಯ ಏಷ ಇತ್ಯಾದಿನಾ ಉಕ್ತಗುಣಕಂ ವೈ ॥ 8 ॥

ನಚಿಕೇತನೇ, ಶರೀರಧಾರಿಗಳಾದ ಜೀವರು ವಿಶ್ರಾಂತಿಗಾಗಿ ನಿದ್ರೆಯನ್ನು ಅನುಭವಿಸುತ್ತಾರಷ್ಟೇ ? ಆಗ ಜೀವರು ಜಾಗ್ರದವಸ್ಥೆಯಲ್ಲಿ (ಎಚ್ಚರವಾಗಿರುವಾಗ) ನೋಡಿರುವ ಅಥವಾ ನೋಡದಿರುವ ವಿಷಯಗಳನ್ನೂ ಸ್ವಪ್ನದಲ್ಲಿ ನೋಡುತ್ತಾರೆ. ಅವುಗಳನ್ನು ತೋರಿಸುವವನು ಶ್ರೀಹರಿಯು. ಇಂತಹ ಸ್ವಪ್ನಾನುಭವವು ಜೀವರ ಇಚ್ಛೆಗೆ ಅನುಸಾರವಾಗಿ ಸ್ವಪ್ನದಲ್ಲಿ ಸೃಷ್ಟಿಮಾಡಿ ತೋರಿಸುವವನು ಆಗ ಎಚ್ಚರವಾಗಿರಲೇಬೇಕಷ್ಟೇ ? ಹೀಗೆ ಜೀವರು ಸ್ವಪ್ನಾವಸ್ಥೆಯಲ್ಲಿರುವಾಗ ಎಚ್ಚತ್ತಿರುವವನೇ ಶ್ರೀಹರಿಯು. ಈ ಮಾಹಾತ್ಮ್ಯವು ಜೀವರಿಗಿಲ್ಲ ॥★

ನ ಪ್ರಾಣೇನೇತ್ಯುಕ್ತಂ ಸರ್ವಜೀವನಿಯಂತೃತ್ವಂ ದೃಷ್ಟಾಂತಾಭ್ಯಾಂ ವ್ಯನಕ್ತಿ- ಅಗ್ನಿರ್ಯಥೇತ್ಯಾದಿನಾ ಮಂತ್ರದ್ವಯೇನ ।

ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ
ರೂಪಂ ರೂಪಂ ಪ್ರತಿರೂಪೋ ಬಭೂವ ।
ಏಕಸ್ತಥಾ ಸರ್ವಭೂತಾಂತರಾತ್ಮಾ
ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥ 9 ॥

ಭುವನಂ ಪ್ರವಿಷ್ಟಃ ಚೇತನೋಽಗ್ನಿಃ ಯಥೈಕಃ ಪಾಕಾದಿಕರ್ತಾ ನಾನ್ಯಃ ತಥಾಽಪ್ಯಸ್ಯ ಚೇತನಾಗ್ನೇಃ ರೂಪಂ ರೂಪಂ ಪ್ರತೀತಿ ಶೇಷಃ । ಪ್ರತೀತ್ಯಸ್ಯಾವೃತ್ತಿರ್ವಾ, ರೂಪಂ ರೂಪಂ ಪ್ರತಿ ಪ್ರತಿರೂಪಃ

---

★ ಓಂ ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ಓಂ (ಬ್ರ. ಸೂ. ಅ. 3 ಪಾ. 2 ಸೂ. 2) ಎಂಬ ಬ್ರಹ್ಮಸೂತ್ರದಲ್ಲಿ ವಿಷ್ಣುವೇ ಸ್ವಪ್ನದಲ್ಲಿ ಸೃಷ್ಟಿಕರ್ತ ಎಂದು ಒಂದು ವೇದಶಾಖೆಯವರು ಹೇಳುತ್ತಾರೆ. ಮತ್ತು ಇನ್ನೊಂದು ಶಾಖೆಯವರು ಪುತ್ರಾದಿಗಳು ಸ್ವಪ್ನದಲ್ಲಿಯೂ ವಿಷ್ಣುವಿನಿಂದಲೇ ಹುಟ್ಟುತ್ತಾರೆ. ಎಂದು ಹೇಳುತ್ತಾರೆ ಎಂದೂ ನಿರ್ಣಯಿಸುತ್ತಾರೆ. (ಯ ಏಷು ಸುಪ್ತೇಷು ಜಾಗರ್ತಿ ಎಂಬ ಶ್ರುತಿಯೂ ಏತಸ್ಮಾದ್ ಹಿ ಏವಪುತ್ರೋ ಜಾಯತೇ ಏತಸ್ಮಾತ್ ಭ್ರಾತಾ, ಏತಸ್ಮಾತ್ ಭಾರ್ಯಾ ಯದ್ವೈನಂ ಪುರುಷಂ ಏಷ ಸ್ವಪ್ನೇನ ಅಭಿಹಂತಿ ಎಂಬ ಗೌಪವನ ಶ್ರುತಿಯೂ ಇಲ್ಲಿ ವಿಷಯವಾಕ್ಯ.

**ಪ್ರತಿಬಿಂಬೋ ಬಭೂವ । ಭೂತಾಗ್ನಿಃ ಅಚೇತನವಹ್ನ್ಯಂಶಾಃ ಚೇತನವಹ್ನ್ಯಂಶಪ್ರತಿಬಿಂಬಕಾಃ । ತತ್ತ-ನ್ನಿಯತತ್ವೇ ಸತಿ ತತ್ಸದೃಶಾ ಇತಿ ಯಾವತ್, ತಥಾ ಸರ್ವಭೂತಾಂತರಾತ್ಮಾ ಸರ್ವಜೀವಾನುಪ್ರವಿಷ್ಟೋ ಭಗವಾನೇಕಃ ಸ್ವತಂತ್ರೋ ನಾನ್ಯಃ । ಅಸ್ಯ ಭಗವತಃ ರೂಪಂ ರೂಪಂ ಪ್ರತಿ ಪ್ರತಿರೂಪೋ ಪ್ರತಿಬಿಂಬೋ ಬಭೂವ ಜೀವಃ । ದ್ವಯೋರಪಿ ಯೋನಿಮಿತ್ಯಾದಿನಾ ಪ್ರಕೃತತ್ವಾತ್ । ತದಾಹ ಸೂತ್ರೇ 'ಆಭಾಸ ಏವ ಚ' (ಬ್ರ.ಸೂ. 2-3-49) ಇತಿ । ಪ್ರತಿಬಿಂಬತ್ವಂ ಚ ತದಧೀನತ್ವೇ ಸತಿ ಕಿಂಚಿತ್ತತ್ಸದೃಶತ್ವಂ ಜ್ಞೇಯಮ್ । ಕಿಂ ತಯೋರಭೇದಃ । ನೇತ್ಯಾಹ ಬಹಿಶ್ಚೇತಿ । ಬಿಂಬಸ್ವರೂಪಾದ್ ಬಹಿರ್ಭೂತಶ್ಚ, ನ ತತ್ ಸ್ವರೂಪಾ-ತ್ಮೇತ್ಯರ್ಥಃ ॥ 9 ॥**

ನಚಿಕೇತನೇ, ಪರಮಾತ್ಮನು ಸರ್ವನಿಯಾಮಕನೆಂಬ ವಿಷಯವನ್ನು ನಿನಗೆ ದೃಷ್ಟಾಂತ ಸಹಿತವಾಗಿ ವಿವರಿಸುತ್ತಾನೆ ಕೇಳು-

ಈ ಭುವನದೊಳಗೆ ಅಲ್ಲಲ್ಲಿ ಅನೇಕ ಭೂತಾಗ್ನಿ (ಜಡಾಗ್ನಿ)ಗಳಿವೆಯಷ್ಟೇ. ಆದರೆ ಅವುಗಳಿಗೆಲ್ಲಾ ಚೇತನನಾದ ಅಗ್ನಿಯು ಒಬ್ಬನೇ. ಅಡಿಗೆ ಮಾಡುವ ಅಗ್ನಿಯೂ ಅವನೇ, ಬಿಸಿನೀರು ಕಾಯಿಸುವ ಅಗ್ನಿಯೂ ಅವನೇ, ಆಹುತಿಯನ್ನು ಸ್ವೀಕರಿಸುವ ಅಗ್ನಿಯೂ ಅವನೇ. ಈ ಚೇತನಾಗ್ನಿಯನ್ನು ಬಿಂಬನೆಂದೂ, ಅಚೇತನಾಗ್ನಿಗಳನ್ನು ಪ್ರತಿಬಿಂಬಗಳೆಂದೂ ಕರೆಯುತ್ತಾರೆ. ಯಾವುದು ಯಾವುದಕ್ಕೆ ಅಧೀನವಾಗಿದ್ದು ಸ್ವಲ್ಪಮಟ್ಟಿಗೆ ಅದರಹಾಗೆಯೇ ಇರುತ್ತದೆಯೋ ಅದನ್ನು ಪ್ರತಿಬಿಂಬವೆಂದು ಹೇಳುತ್ತಾರೆ.

ಅದರಂತೆ ಎಲ್ಲಾ ಜೀವರಲ್ಲಿ ಪ್ರವೇಶಿಸಿರುವ ಪರಮಾತ್ಮನು ಒಬ್ಬನೇ, ಅವನೇ ಸರ್ವತಂತ್ರ ಸ್ವತಂತ್ರನು, ಜೀವರು ಸ್ವತಂತ್ರರಲ್ಲ, ಪರಮಾತ್ಮನ ಪ್ರತಿಯೊಂದು ಬಿಂಬರೂಪಕ್ಕೂ ಜೀವನು ಪ್ರತಿಬಿಂಬನಾಗಿರುತ್ತಾನೆ. ಪರಮಾತ್ಮನ ಅಧೀನ-ನಾಗಿದ್ದು ಸ್ವಲ್ಪಮಟ್ಟಿಗೆ ಅವನಂತೆಯೇ ಇರುವುದರಿಂದ ಜೀವನನ್ನು ಪರಮಾತ್ಮನ ಪ್ರತಿಬಿಂಬನೆಂದು ಹೇಳುತ್ತಾರೆ.

ಓಂ ಅಭಾಸ ಏವ ಚ ಓಂ (ಬ್ರ. ಸೂ. ಅ 2 ಪಾ. 3 ಅಧಿ 18. ಸೂ. 50) ಎಂಬ ಸೂತ್ರದಲ್ಲಿ ಜೀವನು ಪರಮಾತ್ಮನ ಪ್ರತಿಬಿಂಬನೇ ಆಗಿರುವುದರಿಂದ, ಆ ಜೀವನು ಮತ್ಸ್ಯ ಕೂರ್ಮಾದಿ ರೂಪವುಳ್ಳ ಪರಮಾತ್ಮನ ಪೂರ್ಣ ಸಾಮ್ಯವುಳ್ಳವನಲ್ಲ ಎಂದು ಹೇಳುತ್ತಾರೆ. ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯರೂಪಂ ಪ್ರತಿಚಕ್ಷಣಾಯ । ಇಂದ್ರೋಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾದಶ (ಋ. 6-47-18) ಎಂಬ ಮಂತ್ರವು ಜೀವನು ಪರಮಾತ್ಮನ ಪ್ರತಿಬಿಂಬನು ಎಂಬ ವಿಷಯದಲ್ಲಿ ಪ್ರಮಾಣವು. ತ್ರಿವಿಧ ಜೀವಸಮೂಹವು ಪರಮಾತ್ಮನ ಪ್ರತಿಬಿಂಬವಾಗಿರುತ್ತದೆ. ಈ ಪರಮಾತ್ಮನ ರೂಪವು ಯೋಗ್ಯ ಜೀವನಿಗೆ ಮಾತ್ರ ಅಪರೋಕ್ಷವಾಗುತ್ತದೆ. ಮಹೈಶ್ವರ್ಯಶಾಲಿಯಾದ ಪರಮಾತ್ಮನು ತನ್ನ ಸಾಮರ್ಥ್ಯ ಮತ್ತು ಇಚ್ಛಾಶಕ್ತಿಗಳಿಂದ ಅನಂತಜೀವರಿಗೆ ಬಿಂಬರೂಪ ನಾಗಿರುತ್ತಾನೆಂದು ವೇದ ಪುರಾಣಾದಿಗಳು ತಿಳಿಸುತ್ತವೆ. ಈ ಪರಮಾತ್ಮನಿಗೆ, ಅಜಿತಾದಿ ಅನಂತರೂಪಗಳು, ವಿಶ್ವಾದಿ ಸಹಸ್ರರೂಪಗಳು, ನಾರಾಯಣಾದಿ ನೂರು ರೂಪಗಳು, ಮತ್ಸ್ಯಾದಿ ದಶರೂಪಗಳು, ಪರಾದಿ ಬಹುರೂಪಗಳು, ಹರಿನಾಮಕ ಬಹುರೂಪಗಳು, ವ್ಯೂಹರೂಪದಿಂದ (ಗುಂಪು ಗುಂಪಾಗಿ) ಇವೆ. ಹೀಗೆ ಬಿಂಬರೂಪನಾದ ಹರಿಗೂ ಪ್ರತಿಬಿಂಬರೂಪನಾದ ಜೀವನಿಗೂ ಎಲ್ಲಾ ರೀತಿಯಿಂದ ಭೇದವಿದೆ. ಜೀವನು ಬಿಂಬರೂಪಿಯಾದ ಹರಿಗಿಂತ ಹೊರಗಿಂತ ಹೊರಗಿರುವವನು- ಅಂದರೆ ಬಿಂಬರೂಪಿಯ ಅಭೇದ ಉಳ್ಳವನಲ್ಲ.

**ವಾಯುರ್ಯಥೈಕೋ ಭುವನಂ ಪ್ರವಿಷ್ಟೋ**
**ರೂಪಂ ರೂಪಂ ಪ್ರತಿರೂಪೋ ಬಭೂವ ।**
**ಏಕಸ್ತಥಾ ಸರ್ವಭೂತಾಂತರಾತ್ಮಾ**
**ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ॥ 10 ॥**

**ವಾಯುರ್ಯಥೇತಿ । ಯಥಾ ಚೇತನವಾಯುರಿತ್ಯಾದಿರೂಪೇಣ ಪ್ರಾಗ್ವತ್ ಯೋಜನಾ ॥ 10 ॥**

ಈ ಪ್ರಪಂಚದೊಳಗಿರುವ ಚೇತನವಾಯುವು ಒಬ್ಬನೇ ಇದ್ದಾನೆ. ಅವನೇ ಬೀಸುವಿಕೆ ಎಂಬ ಕೆಲಸವನ್ನು ಮಾಡು- ವನು. ಬೇರೊಬ್ಬನಲ್ಲಿ. ಆದರೂ ಈ ಚೇತನನಾದ ವಾಯುವಿನ ಪ್ರತಿಬಿಂಬಗಳಾದ ಆನೇಕ ಭೌತ ವಾಯುಗಳು ಅಂದರೆ ಜಡವಾಯುಗಳು- ಎಲ್ಲಾ ಕಡೆಯೂ ಇವೆ. ಹೀಗೆಯೇ ಎಲ್ಲಾ ಜೀವರಲ್ಲಿಯೂ ಪ್ರವೇಶಮಾಡಿರುವ ಪರಮಾತ್ಮನು ತಾನು ಸ್ವತಂತ್ರನಾಗಿ ಒಬ್ಬನೇ ಬಿಂಬರೂಪಿಯಾಗಿದ್ದಾನೆ. ಪರಮಾತ್ಮನ ಬಿಂಬರೂಪಕ್ಕೆ ಅನುಗುಣವಾಗಿ ಜೀವನು ಪ್ರತಿಬಿಂಬ- ನಾಗಿದ್ದಾನೆ. ಜೀವನು ಬಿಂಬರೂಪಿಯಾದ ಹರಿಸ್ವರೂಪನಲ್ಲ-ಅವನಿಂದ ಹೊರಗಿರುವನು-ಭಿನ್ನನು.

**ಕ್ಲಿಶ್ಯಮಾನಜಗದಂತಃಪ್ರವಿಷ್ಟಸ್ಯಾಪಿ ಕ್ಲೇಶಃ ಸ್ಯಾದಿತಿ ಚೋದ್ಯಂ ಸದೃಷ್ಟಾಂತಂ ನಿರಾಹ ಸೂರ್ಯೋ ಯಥೇತಿ ।**

**ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುಃ**
**ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ ।**
**ಏಕಸ್ತಥಾ ಸರ್ವಭೂತಾಂತರಾತ್ಮಾ**
**ನ ಲಿಪ್ಯತೇ ಲೋಕದುಃಖೇನ ಬಾಹ್ಯಃ ॥ 11 ॥**

**ಚಕ್ಷುರ್ದ್ವಿವಿಧಂ ಬಾಹ್ಯಮಾಂತರಂ ಚೇತಿ । ಬಾಹ್ಯಂ ಜಡಮ್ । ಆಂತರಂ ತು ತದಭಿಮಾನಿ- ಸೂರ್ಯಚೇತನರೂಪಮ್ । 'ಆದಿತ್ಯಶ್ಚಕ್ಷುರ್ಭೂತ್ವಾ ಽಕ್ಷಿಣೀ ಪ್ರಾವಿಶತ್' ಇತ್ಯಾದೇಃ । ತಥಾ ಚ ಯಥಾ ಸೂರ್ಯಃ ಸರ್ವಲೋಕಸ್ಯ ಚಕ್ಷುಃ ಚಕ್ಷುರ್ನಿಯಂತೃತಯಾ ಚಕ್ಷುರ್ನಾಮಕಃ ಚಕ್ಷುರಂತಸ್ಥಃ ಸನ್ನಪಿ ಚಾಕ್ಷುಷೈಃ ಬಾಹ್ಯದೋಷೈಃ ಬಾಹ್ಯಚಕ್ಷುಸ್ಸಂಬಂಧಿಭಿಃ ದೋಷೈರ್ನ ಲಿಪ್ಯತೇ, ತಥೈಕ: ಸ್ವತಂತ್ರ: ಬಾಹ್ಯೋ ಜೀವಸ್ವರೂಪಾನಾತ್ಮಕ: ಬಹಿರ್ಭೂತಸ್ಸನ್ನ ಲಿಪ್ಯತೇ ಸ್ವತಂತ್ರತ್ವಾದಿತಿ ಭಾವಃ । ತದಾಹ ಸೂತ್ರೇ 'ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್' (ಬ್ರ. ಸೂ. 1-2-8) ಇತಿ ॥ 11 ॥**

ಪ್ರಶ್ನೆ :- ಕಷ್ಟ ಪರಂಪರೆಗಳಲ್ಲಿ ತೊಳಲಾಡುತ್ತಿರುವ ಜಗತ್ತಿನೊಳಗೆ ಪರಮಾತ್ಮನು ವ್ಯಾಪಿಸಿಕೊಂಡಿರುತ್ತಾನೆಂದು ಒಪ್ಪಿಕೊಂಡರೆ ಆ ಪರಮಾತ್ಮನಿಗೂ ಕಷ್ಟಗಳು ಬರುವುದಿಲ್ಲವೇ ?

ಉತ್ತರ :- ಇಲ್ಲ, ನಮಗೆಲ್ಲರಿಗೂ ಕಣ್ಣುಗಳಿವೆಯಷ್ಟೇ ? ಆ ಕಣ್ಣು ಎರಡು ವಿಧ. ಹೊರಗಿನ ಕಣ್ಣು, ಒಳಗಿನ ಕಣ್ಣು ಎಂದು. ಕಣ್ಣುಗಳಲ್ಲಿ ಹೊರಗಿನ ಕಣ್ಣು ಜಡ, ಅದು ತಾನು ಸ್ವತ: ಏನೂ ಮಾಡಲಾರದು. ಅದರೊಳಗೆ ಚೇತನವಾದ ಕಣ್ಣು

ಒಂದಿದೆ. ಅದೇ ಸೂರ್ಯ, ಜಡವಾದ ಕಣ್ಣಿಗೆ ಅಭಿಮಾನಿಯಾಗಿದ್ದು ಕಣ್ಣಿನಿಂದ ಕೆಲಸಮಾಡಿಸುವವನು ಸೂರ್ಯ ಭಗವಂತನೇ ಆಗಿದ್ದಾನೆ.★

ಸೂರ್ಯನು ಎಲ್ಲಾ ಜೀವಲೋಕದ ಕಣ್ಣುಗಳನ್ನು ನಡೆಸುವವನಾಗಿ ಚಕ್ಷುಸ್ (ಕಣ್ಣು) ಎಂಬ ಹೆಸರಿನಿಂದ ಕಣ್ಣಿನೊಳಗೆ ಇರುತ್ತಾನೆ. ಆದರೆ ಅವನಿಗೆ ಜಡವಾದ ಕಣ್ಣಿಗೆ ಬರುವ ಯಾವ ದೋಷಗಳ ಲೇಪವೂ ಇರುವುದಿಲ್ಲ. ಅದರಂತೆಯೇ ಸ್ವತಂತ್ರನಾದ ಪರಮಾತ್ಮನು ಜೀವಸ್ವರೂಪಕ್ಕಿಂತ ಭಿನ್ನನಾಗಿ ಜೀವನ ದೋಷಗಳ ಸಂಬಂಧದಿಂದ ಕ್ಲೇಶಪಡುವುದಿಲ್ಲ.★

**ಏಕಪದೋಕ್ತಂ ಸ್ವಾತಂತ್ರ್ಯಂ ವ್ಯಂಜಯನ್ ಏಕಸ್ಯ ನಾನಾಜೀವನಿಯಂತೃತ್ವಂ ಕಥಮಿತಿ ಚೋದ್ಯಂ ಬಹುರೂಪತ್ವೋಕ್ತ್ಯಾ ನಿರಾಹ- ಏಕೋ ವಶೀತಿ ।**

ಪರಮಾತ್ಮನು ಸ್ವತಂತ್ರನೆಂದು ಹೇಳುತ್ತಾರೆ. ಆ ಸ್ವಾತಂತ್ರ್ಯವು ಅವನಿಗೊಬ್ಬನಿಗೆ ಹೇಗೆ ಬಂದಿದೆ ? ಒಬ್ಬನೇ ಪರಮಾತ್ಮನು ಅನಂತ ಜೀವ ರಾಶಿಗಳನ್ನು ಹೇಗೆ ನಡೆಸುತ್ತಾನೆ ? ಈ ಪ್ರಶ್ನೆಗಳಿಗೆ ಇಲ್ಲಿ ಉತ್ತರ ಹೇಳಿದ್ದಾರೆ.

**ಏಕೋ ವಶೀ ಸರ್ವಭೂತಾಂತರಾತ್ಮಾ**
**ಏಕಂ ರೂಪಂ ಬಹುಧಾ ಯಃ ಕರೋತಿ ।**
**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ**
**ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥ 12 ॥**

**ಕೈಮುತ್ಯೇನಾಪಿ ಭಗವತೋ ದುಃಖಾಸ್ಪೃಷ್ಟತ್ವಮಾಹ- ತಮಿತಿ । ಯೇ ಆತ್ಮಸ್ಥಂ ಪಶ್ಯಂತಿ ತೇಷಾಮಪಿ ಸರ್ವದುಃಖಪ್ರಹಾಣೇನ ಶಾಶ್ವತಂ ಸುಖಂ ಕಿಲ । ತಸ್ಯ ಹರೇಃ ಕಥಂ ದುಃಖಸ್ಪರ್ಶ ಇತಿ ಭಾವಃ ॥ 12 ॥**

ಪರಮಾತ್ಮನು ಸರ್ವತಂತ್ರ ಸ್ವತಂತ್ರನು. ಏಕೆಂದರೆ ಅವನು ಎಲ್ಲವನ್ನೂ ತನ್ನ ಅಧೀನದಲ್ಲಿಟ್ಟುಕೊಳ್ಳುವ ಸಾಮರ್ಥ್ಯ-ವನ್ನು ಪಡೆದಿದ್ದಾನೆ. ಅವನೇ ಎಲ್ಲಾ ಜೀವರಾಶಿಯಲ್ಲಿಯೂ ಒಳಗೆ ಅಡಗಿದ್ದು ನಡೆಸುವನು. ಅವನು ಒಬ್ಬನೇ ಆಗಿದ್ದರೂ ಅನಂತರೂಪಗಳನ್ನು ಸ್ವೀಕರಿಸುತ್ತಾನೆ. ಆದುದರಿಂದ ಅನಂತಾನಂತ ಜೀವರಲ್ಲಿದ್ದು ಅವರನ್ನು ನಿಯಮಿಸುತ್ತಾನೆ. ಅಂದರೆ ಅವರವರ ಕಾರ್ಯದಲ್ಲಿ ಪ್ರೇರಿಸುತ್ತಾನೆ.

ಅವರವರಲ್ಲಿ ಬಿಂಬರೂಪದಿಂದ ಸನ್ನಿಹಿತನಾಗಿರುವ ಪರಮಾತ್ಮನನ್ನು ತಮ್ಮ ಯೋಗ್ಯತಾನುಸಾರವಾಗಿ ಯಾರು ಸಾಕ್ಷಾತ್ಕರಿಸಿಕೊಳ್ಳುತ್ತಾರೋ ಅವರಿಗೆ ಶಾಶ್ವತವಾದ ಸುಖವು ಸಿಗುತ್ತದೆ. ಅವರ ದುಃಖಗಳೆಲ್ಲವೂ ನಾಶವಾಗುತ್ತವೆ. ಹೀಗೆ

---

★ (ಆದಿತ್ಯಃ ಚಕ್ಷುಃ ಭೂತ್ವಾ ಅಕ್ಷಿಣೀ ಪ್ರಾವಿಶತ್-ಸೂರ್ಯನು ಕಣ್ಣಿನ ಅಭಿಮಾನಿ ದೇವತೆಯಾಗಿ ಕಣ್ಣುಗಳನ್ನು ಪ್ರವೇಶಿಸಿದನು. ಐತರೇಯ ದ್ವಿತೀಯಾರಣ್ಯಕ 4 ಅಧ್ಯಾಯ 2ನೇ ಮಂತ್ರ).

★ (ಓಂ ಸಂಭೋಗಪ್ರಾಪ್ತಿರಿತಿ ಚೇನ್ನವೈಶೇಷ್ಯಾತ್ ಓಂ, ಬ್ರ.ಸೂ. ಅ. 1 ಪಾ. 2 ಅಧಿ 1 ಸೂ. 8). ಜೀವಪರಮಾತ್ಮರು ಒಂದೇ ಶರೀರದಲ್ಲಿದ್ದರೆ ಇಬ್ಬರಿಗೂ ಒಂದೇ ರೀತಿಯ ದುಃಖ ಅಥವಾ ಸುಖಗಳು ಒದಗಬೇಕಾಗುತ್ತದೆ ಎಂಬ ಶಂಕೆಗೆ ಅವಕಾಶವಿಲ್ಲ. ಪರಮಾತ್ಮನಿಗೆ ವಿಶೇಷ ಸಾಮರ್ಥ್ಯವಿರುವುದರಿಂದ ಅವನು ಜೀವನ ಜೊತೆಗಿದ್ದರೂ ಜೀವನ ಸುಖದುಃಖಗಳನ್ನು ಅನುಭವಿಸುವುದಿಲ್ಲ. ಈಶ್ವರನು ಸರ್ವಜ್ಞನಾದುದರಿಂದ ಮುಂದೆ ಬರಲಿರುವ ದುಃಖವನ್ನು ತಿಳಿದು ಪರಿಹರಿಸಿಕೊಳ್ಳುವ ಸಾಮರ್ಥ್ಯವುಳ್ಳವನಾಗಿದ್ದಾನೆ. ಜೀವನಿಗೆ ಅಂತಹ ಸಾಮರ್ಥ್ಯವಿಲ್ಲ ಎಂದು ಹೇಳಿದ್ದಾರೆ. ॥

ಪರಮಾತ್ಮನನ್ನು ಆಶ್ರಯಿಸಿ ಅವನ ಅನುಗ್ರಹ ಪಡೆದವರು ಸಮಸ್ತ ದುಃಖದೂರರಾಗಿ ನಿತ್ಯಸೌಖ್ಯವನ್ನು ಪಡೆಯುವರೆಂದ ಮೇಲೆ ಆ ಪರಮಾತ್ಮನು ದುಃಖಕ್ಕೆ ದೂರ, ಸುಖದ ಅಖಂಡ ಆಗಾರ ಎಂದು ಹೇಳತಕ್ಕದ್ದೇನಿದೆ. ಇದು ಕೈಮುತ್ಯನ್ಯಾಯಸಿದ್ಧವಾಗಿದೆ.

**ಏಕೋ ವಶೀತ್ಯುಕ್ತಂ ಸ್ವಾತಂತ್ರ್ಯಂ ಸಮರ್ಥಯತೇ- ನಿತ್ಯ ಇತಿ ।**

**ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ**
**ಏಕೋ ಬಹೂನಾಂ ಯೋ ವಿದಧಾತಿ ಕಾಮಾನ್ ।**
**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ**
**ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಮ್ ॥ 13 ॥**

**ನಿತ್ಯಾನಾಂ ವಸ್ತೂನಾಂ ನಿತ್ಯೋಽತಿಶಯೇನ ನಿತ್ಯಃ । ಚೇತನಾನಾಂ ಚೇತನೋ ಮುಖ್ಯಚೇತನಃ । ಅನ್ಯೇ ಚೇತನಾಭಾಸಾಃ । ತದಧೀನಾ ಇತಿ ಯಾವತ್ । ಪರಮಚೇತನತ್ವಾತ್ ಸ್ವತಂತ್ರಃ । ಸ್ವತಂತ್ರತ್ವಾತ್ ದುಃಖಾಶ್ಲೇಷ ಇತಿ ಭಾವಃ । ಬಹೂನಾಂ ಚೇತನಾನಾಂ ಶಾಂತಿಃ ಸುಖಮ್ ॥ 13 ॥**

ಪರಮಾತ್ಮನು ಸರ್ವವಿಧದಲ್ಲಿಯೂ ಸ್ವತಂತ್ರನೆಂದು ಅನೇಕರೀತಿಯಿಂದ ತಿಳಿಯಬಹುದು.

ಪರಮಾತ್ಮನು ನಿತ್ಯವಸ್ತುಗಳಲ್ಲಿಯೂ ಅತಿಶಯವಾದ ನಿತ್ಯತ್ವದಿಂದ ಕೂಡಿ ಇರುತ್ತಾನೆ. ನಿತ್ಯವಸ್ತುಗಳಿಗೂ (ಜೀವಾದಿಗಳಿಗೆ) ಅಸ್ವಾತಂತ್ರ್ಯ, ದೇಹನಾಶ, ದುಃಖ, ಅಪೂರ್ಣತೆಗಳೆಂಬ ದೋಷಗಳಿವೆ. ಪರಮಾತ್ಮನಿಗೆ ಇವು ಇಲ್ಲವಾದುದರಿಂದ ಅವನು ನಿತ್ಯನಿತ್ಯನು. ಸಮಸ್ತಚೇತನರಾಶಿಗಳಲ್ಲಿ ಅವನು ಮುಖ್ಯ ಚೇತನನು. ಇತರ ಚೇತನಗಳಿಗೆ ಚೈತನ್ಯಶಕ್ತಿಯನ್ನು ಕೊಡುವವನು ಅವನೇ. ಆದುದರಿಂದ ಅವನು ಚೇತನಚೇತನನು, ಅಂದರೆ ಪರಮಚೇತನನು. ಇತರರು ಚೇತನಾಭಾಸರು. ಚೇತನನಾದ ಪರಮಾತ್ಮನ ಪ್ರತಿಬಿಂಬರು- ಅವನ ಅಧೀನರು. ಪರಮಾತ್ಮನು ಪರಮಚೇತನ-ನಾದುದರಿಂದ ಸ್ವತಂತ್ರನು. ಹೀಗೆ ಸರ್ವತಂತ್ರ ಸ್ವತಂತ್ರನಾಗಿರುವ ಪರಮಾತ್ಮನನ್ನು ದುಃಖವು ಸೋಂಕುವುದೇ ? ಬಾಯಾರಿಕೆಯನ್ನು ಇಂಗಿಸಲು ಯಾರಾದರೂಕಾಡ್ಗಿಚ್ಚನ್ನು ನೆಕ್ಕುವರೇ ?

ಇಂತಹ ಪರಮನಿತ್ಯ ಪರಮಚೇತನ-ಪರಮ ಸ್ವತಂತ್ರನಾದ ಪರಮಾತ್ಮನು ಜೀವರ ಯೋಗ್ಯತೆ ಮತ್ತುಪೂರ್ವ ಕರ್ಮಗಳನ್ನು ಅನುಸರಿಸಿ, ಅವರವರಿಗೆ ಯೋಗ್ಯವಾದ ಭೋಗ ಸಾಧನಗಳನ್ನು ಒದಗಿಸಿ ಅನಂತಾನಂತ ಜೀವರನ್ನು ಸುಖದುಃಖ ಸುಳಿಯಲ್ಲಿ ತಿರುಗಿಸುತ್ತಾನೆ.

ಇಂತಹ ಪರಮಾತ್ಮನು ಜೀವರ ಸ್ವರೂಪದೇಹದಲ್ಲಿ ಬಿಂಬ ರೂಪಿಯಾಗಿ ನೆಲೆಸಿರುತ್ತಾನೆ. ಅವನನ್ನು ಯಾರು ಭಕ್ತಿಯಿಂದ ಧ್ಯಾನಿಸಿ ಪ್ರತ್ಯಕ್ಷೀಕರಿಸಿ ಪ್ರಸನ್ನನನ್ನಾಗಿ ಮಾಡಿಕೊಳ್ಳುತ್ತಾರೋ ಅವರಿಗೆ ಶಾಶ್ವತವಾದ ಸುಖವು ಸಿಗುತ್ತದೆ. ಪರಮಾತ್ಮನನ್ನು ಉಪೇಕ್ಷಿಸಿದವರಿಗಲ್ಲ, ಅವನನ್ನು ದ್ವೇಷಿಸುವವರಿಗೆ ಸರ್ವಥಾ ಸುಖಲೇಶವೂ ಇಲ್ಲ.

**ಭಗವತೋ ಮಹಿಮಾಂತರಮಾಹ- ತದೇತದಿತಿ ।**

**ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್ ।**
**ಕಥಂ ನು ತದ್ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ ॥ 14 ॥**

ತದ್ ಗುಹ್ಯಂ ಬ್ರಹ್ಮ ಇತ್ಯುಪಕ್ರಾಂತಂ ಏತದ್ ಏಕಂ ರೂಪಂ ಇತಿ ಮಧ್ಯೇ ಚೋಕ್ತಂ ಬ್ರಹ್ಮಣೋ ರೂಪಮನಿರ್ದೇಶ್ಯಮಿದಮಿತ್ಥಮಿತಿ ನಿರ್ದೇಷ್ಟುಮಶಕ್ಯಂ ಪರಮಂ ಸುಖಂ ಅನಿರ್ದೇಶ್ಯಪರಮಸುಖಾ-ತ್ಮಕಮಿತಿ (ಏನಂ) ಜ್ಞಾನಿನೋ ಮನ್ಯಂತೇ । ತತ್ತಾದೃಕ್‌ಸುಖಾತ್ಮಕಂ ಭಗವದ್ರೂಪಂ ಕಥಂ ನು ಜಾನೀಯಾಂ ತತ್‌ಪ್ರಸಾದಮೃತೇ ? ಕಿಮು ಭಾತಿ ನ ಭಾತಿ ವೇತಿ । ಟೀಕಾಯಾಂ ತು ಯದನಿರ್ದೇಶ್ಯಂ ಸುಖಂ ಕಥಂ ನು ತದ್ ವಿಜಾನೀಯಾಂ ಇತ್ಯಾನುಕೂಲ್ಯೇನ ಗೃಹ್ಣಂತಿ ತದನಿರ್ದೇಶ್ಯಂ ಸುಖಂ ಏತತ್ ಪ್ರಕೃತಮಾತ್ಮನೋ ರೂಪಮಿತಿ ಮನ್ಯಂತ ಇತಿ ಯೋಜನೋಕ್ತಾ । ಜಾನೀಯಾಮಿತಿ ಪ್ರಾರ್ಥನಾಯಾಂ ಲಿಙ್ । ಜ್ಞಾನಾರ್ಥಂ ಪ್ರಾರ್ಥಿತತ್ವಮಾನುಕೂಲ್ಯೇನ ಗ್ರಹಣಮ್ ॥ 14 ॥

ಪರಮಾತ್ಮನ ಮಹಿಮೆಗಳಿಗೆ ಎಣೆಯುಂಟೇ ? ನಚಿಕೇತನೇ ಕೇಳು, ಅವನ ಮಹಿಮೆಗಳ ಒಂದು ಲೇಶವನ್ನು ಹೇಳುತ್ತೇನೆ.

ಹಿಂದೆ ಪರಬ್ರಹ್ಮವು ಬಹಳ ರಹಸ್ಯವಾದುದೆಂದು ಹೇಳಿದೆನಷ್ಟೆ. ಹಾಗೆಯೇ ಪರಬ್ರಹ್ಮನು ಒಬ್ಬನೇ ಆದರೂ ಬಹಳ ರೂಪಗಳನ್ನು ಸ್ವೀಕರಿಸುತ್ತಾನೆಂದು ಹೇಳಿದ್ದೇನೆ. ಅಂತಹ ಅದ್ಭುತರೂಪದ ಪರಬ್ರಹ್ಮಸ್ವರೂಪವು ಇದು ಹೀಗೆಯೇ ಇದೆಯೆಂದು ನಿರ್ದೇಶಿಸಲು ಸಾಧ್ಯವಿಲ್ಲ. ಆ ಪರಬ್ರಹ್ಮವು ಇದು ಹೀಗೆಯೇ ಇದೆಯೆಂದು ನಿರ್ಧರಿಸಲು ಸಾಧ್ಯವಾಗದ ಪರಮಾನಂದ ಸ್ವರೂಪವುಳ್ಳದ್ದು ಎಂದು ಜ್ಞಾನಿಗಳು ತಿಳಿಯುತ್ತಾರೆ. ಅಂತಹ ಪರಮಾನಂದ ಸ್ವರೂಪವುಳ್ಳ ಪರಮಾತ್ಮ-ನನ್ನು ಅವನ ಅನುಗ್ರಹವಿಲ್ಲದೆ ನಾನಾದರೂ ಹೇಗೆ ತಿಳಿದೇನು ? ಅದು ನನಗೆ ಪ್ರಕಾಶವಾಗುತ್ತದೆಯೇ ಇಲ್ಲವೇ ? ಅಂದರೆ ನನಗೆ ಗೋಚರವಾಗುತ್ತದೆಯೇ ಇಲ್ಲವೇ ಎಂದು ಜ್ಞಾನಿಗಳೂ ಜ್ಞಾನಕ್ಕೋಸ್ಕರ ಪ್ರಾರ್ಥಿಸುತ್ತಾರೆ.

ತಸ್ಯ ಮಹಿಮಾಂತರಮಾಹ - ನ ತತ್ರೇತಿ ।

ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।
ತಮೇವ ಭಾಂತಮನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ 15 ॥

*॥ ಇತಿ ದ್ವಿತೀಯಾಧ್ಯಾಯೇ ದ್ವಿತೀಯಾ ವಲ್ಲೀ ॥*

ತತ್ರ ಕಥಂ ನು ತದ್ವಿಜಾನೀಯಾಂ ಇತ್ಯತ್ರ ತತ್ಪದೋಕ್ತಜ್ಞಾನಾರ್ಥಂ ಪ್ರಾರ್ಥಿತೇ ವಸ್ತುನಿ ಸೂರ್ಯಾದಿರ್ನ ಭಾತಿ ನ ಭಾಸಯತೇ । ಚಂದ್ರತಾರಕಮಿತಿ ದ್ವಂದ್ವೈಕವದ್ಭಾವಃ । ತಮೇವ ಭಾಂತ-ಮನು ತದ್ಭಾನಮನುಸೃತ್ಯ ಸರ್ವಂ ಸೂರ್ಯಾದಿತೇಜೋಜಾತಂ ಭಾತಿ । ತಸ್ಯ ಭಾಸಾ ಸರ್ವಮಿದಂ ಜಗತ್ ವಿಭಾತೀತಿ । ತಥಾ ಚ ಸೂತ್ರಂ 'ಅನುಕೃತೇಸ್ತಸ್ಯ ಚ' (ಬ್ರ. ಸೂ. 1-3-22) ಇತಿ ॥ 15 ॥

*॥ ಇತಿ ಕಾಠಕಾರ್ಥಸಂಗ್ರಹೇ ದ್ವಿತೀಯಾಧ್ಯಾಯೇ ದ್ವಿತೀಯಾ ವಲ್ಲೀ ॥*

ಪರಮಾತ್ಮನ ಜ್ಞಾನವು ನನಗೆ ಇದೆಯೇ ಇಲ್ಲವೇ ಎಂದು ಆಕಾಂಕ್ಷೆಗೆ ಒಳಗಾದ ಪರಬ್ರಹ್ಮನ ಸ್ವರೂಪವು ಸ್ವಪ್ರಕಾಶವಾದುದು. ಅದರ ವಿಷಯದಲ್ಲಿ ಸೂರ್ಯನು ಪ್ರಕಾಶಕನಾಗುವುದಿಲ್ಲ, ಚಂದ್ರ ಮತ್ತು ನಕ್ಷತ್ರಗಳು ಆ ಪರಬ್ರಹ್ಮನನ್ನು ಪ್ರಕಾಶಗೊಳಿಸಲಾರವು. ಈ ಮಿಂಚುಗಳೂ ಪರಬ್ರಹ್ಮನನ್ನು ಪ್ರಕಾಶಗೊಳಿಸಲಾರವು. ಈ ಅಲ್ಪವಾದ ಅಗ್ನಿಯು ಪರಬ್ರಹ್ಮವನ್ನು ಪ್ರಕಾಶ ಗೊಳಿಸಲಾರದೆಂದು ಹೇಳಬೇಕಾಗಿಯೇ ಇಲ್ಲವಷ್ಟೆ

ಸ್ವಯಂ ಪ್ರಕಾಶವಾಗಿರುವ ಆ ಪರಬ್ರಹ್ಮನ ಪ್ರಕಾಶವನ್ನು ಅನುಸರಿಸಿ ಈ ಚಂದ್ರಸೂರ್ಯಾದಿ ಜ್ಯೋತಿಗಳು ಸ್ವಲ್ಪಮಟ್ಟಿಗೆ ಪ್ರಕಾಶಿಸುತ್ತವೆ. ಆ ಪರಬ್ರಹ್ಮನ ಪ್ರಕಾಶ ದಿಂದಲೇ ಈ ಜಗತ್ತೆಲ್ಲವೂ ಪ್ರಕಾಶಿಸುತ್ತದೆ. ಅಂದರೆ ಅವರವರ ಯೋಗ್ಯತಾನುಸಾರವಾಗಿ ತಿಳುವಳಿಕೆಗೆ ಬರುತ್ತದೆ.

★(ಟೀಕಾ ರೀತಿಯಿಂದ) ಜ್ಞಾನಿಗಳಿಂದ ಪ್ರಾರ್ಥಿತವಾದ ಪರಮ ಸುಖವು ಪರಬ್ರಹ್ಮ ಸ್ವರೂಪವಾದುದು. ಜೀವರ ಸುಖವು ಪರಬ್ರಹ್ಮ ಸ್ವರೂಪವಲ್ಲ ಎಂಬ ಅರ್ಥವನ್ನೂ ಇಟ್ಟುಕೊಳ್ಳಬೇಕು. ॥

**ಇಲ್ಲಿಗೆ ಕಾಠಕ ದ್ವಿತೀಯಾಧ್ಯಾಯ ದ್ವಿತೀಯವಲ್ಲಿಯು ಸಮಾಪ್ತವಾಯಿತು.**

★ ★ ★

# ದ್ವಿತೀಯಾಧ್ಯಾಯ ತೃತೀಯವಲ್ಲೀ

ಪರಮಾತ್ಮನ ಮಹಿಮೆಯನ್ನು ಸರಿಯಾಗಿ ತಿಳಿದರೆ ಮಾತ್ರವೇ ಅವನಲ್ಲಿ ನಿರಂತರ ನಿರತಿಶಯ ಭಕ್ತಿಯುಟಾಗಿ ಅವನ ಧ್ಯಾನ ಮಾಡಲು ಸಾಧ್ಯವಾಗುತ್ತದೆ. ಆದುದರಿಂದ ಪರಮಾತ್ಮನ ಮಹಿಮೆಯು ಸುಲಭವಾಗಿ ಸಜ್ಜನರ ಬುದ್ಧಿಯಲ್ಲಿ ಗೋಚರವಾಗುವುದಕ್ಕಾಗಿ ಲೋಕಪ್ರಸಿದ್ಧವಾದ ವಸ್ತುಗಳ ಹೋಲಿಕೆಗಳಿಂದ ಪರಮಾತ್ಮನ ಮಹಿಮೆಯನ್ನು ಯಮ-ಧರ್ಮರು ನಚಿಕೇತನಿಗೆ ತಿಳಿಸುತ್ತಾರೆ.

**ಸಾಧೂನಾಂ ಭಗವನ್ಮಹಿಮ್ನೋ ಬುದ್ಧ್ಯಾರೋಹಾಯ ಲೋಕಪ್ರಸಿದ್ಧಾರ್ಥಸಾಮ್ಯೇನ ತನ್ಮಹಿ-ಮಾನಮಾಹ- ಊರ್ಧ್ವೇತಿ ॥**

**ಊರ್ಧ್ವಮೂಲೋಽರ್ವಾಕ್‌ಶಾಖ ಏಷೋಽಶ್ವತ್ಥಃ ಸನಾತನಃ ।**
**ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ ।**
**ತಸ್ಮಿಂಲ್ಲೋಕಾ: ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ । ಏತದ್ವೈ ತತ್ ॥ 1 ॥**

**ಊರ್ಧ್ವಃ ಸರ್ವೋಚ್ಚೋ ಭಗವಾನ್ ಮೂಲಂ ವೃಕ್ಷಮೂಲಂ ಭೂತಲಮಿವ ಮೂಲಂ ಯಸ್ಯ ಜಗದಾಖ್ಯವೃಕ್ಷಸ್ಯ ಸ ಊರ್ಧ್ವಮೂಲಃ । ಅರ್ವಾಕ್ ಅರ್ವಾಂಚಃ ಅಧಮಾಃ ದೇವಾಃ ಶಾಖಾಃ**

★ ಓಂ ಅನುಕೃತೇಸ್ತಸ್ಯ ಚ ಓಂ ಬ್ರ. ಸೂ ಅ 1 ಪಾ 2 ಅಧಿ 6 ಸೂ 22 ಕಥಂನು ತದ್ವಿಜಾನೀಯಾಂ ಆ ಪರಬ್ರಹ್ಮಸ್ವರೂಪವಾದ ಸುಖವನ್ನು ಹೇಗೆ ತಿಳಿದೇನು ಎಂದು ಜ್ಞಾನಕ್ಕಾಗಿ ಪ್ರಾರ್ಥಿಸಲ್ಪಟ್ಟ ವಸ್ತುವು ವಿಷ್ಣುವೇ ಆಗಿದ್ದಾನೆ. ತಮೇವ ಭಾಂತಮನುಭಾತಿ ಸರ್ವಂ ಎಂಬ ಶ್ರುತಿಯಲ್ಲಿ ಪ್ರಕಾಶವುಳ್ಳ ಸೂರ್ಯಾದಿ ಜಗತ್ತಿನ ಪ್ರಕಾಶಕ್ಕೂ ಕಾರಣವಾದ ಪ್ರಕಾಶವು ಪರಬ್ರಹ್ಮನಲ್ಲಿದೆ. ಏಕೆಂದರೆ ಸರ್ವಜಗತ್ತಿಗೆ ಪ್ರಕಾಶವನ್ನುಂಟುಮಾಡುವ ಪ್ರಕಾಶಕ್ಕೆ ಆಶ್ರಯವು ಪರಬ್ರಹ್ಮವೇ ಆಗಿದೆ ಎಂದು ಉಕ್ತವಾಗಿದೆ.

**ಯಸ್ಯಾಸೌ ಅರ್ವಾಕ್‌ಶಾಖಃ । ಭೂಮಿಗತವೃಕ್ಷಮೂಲಂ ತು ಶ್ರೀತತ್ತ್ವಂ ಜ್ಞೇಯಮ್ । ಏಷಃ ಪ್ರಮಾಣಪ್ರಮಿತೋ ಜಗದಾಖ್ಯೋಽಶ್ವತ್ಥಃ ಅಶ್ವತ್ಥತರುರಿವ ಸ್ಥಿತಃ । ಆಶುಗತಿಮತ್ತ್ವಾದಶ್ವೋ ಹರಿಃ । ಆಶೂಪಪದಾತ್ ವಾಧಾತೋಃ ಕಪ್ರತ್ಯಯೇ ಉಪಪದಾಂತಲೋಪೇ ಹ್ರಸ್ವತ್ವೇ ಚ ಅಶ್ವ ಇತಿ ಸಿದ್ಧೇಃ, ಅಶ್ವಃ ಅಸ್ಮಿನ್ ತಿಷ್ಠತೀತಿ ವಾ, ಅಶ್ವಸ್ಯ ಥಮನ್ನಮಿತಿ ವಾಽಶ್ವತ್ಥಃ । ಸನಾತನಃ ಪ್ರವಾಹತೋಽನಾದಿಃ । ತದೇವ ಊರ್ಧ್ವಾಖ್ಯಂ ಮೂಲಮೇವ ಶುಕ್ರಮ್ । ವ್ಯಾಖ್ಯಾತಾನಿ ಪದಾನಿ । ಏತದ್ವೈ ತತ್, ತ್ವಯಾ ಪೃಷ್ಟಂ ಏತಾದೃಶಗುಣಕಂ ವೈ ಇತಿ ॥ 1 ॥**

ಈ ಜಗತ್ತೆಂಬ ವೃಕ್ಷಕ್ಕೆ ಊರ್ಧ್ವ ಎಂದರೆ ಎಲ್ಲರಿಗಿಂತಲೂ ಮೇಲಿರುವ ಅರ್ಥಾತ್ ಸರ್ವೋತ್ತಮನಾದ ಭಗವಂತನೇ ಮೂಲವು. ಲೋಕದಲ್ಲಿ ಪ್ರಸಿದ್ಧವಾದ ಮರಕ್ಕೆ ಭೂಮಿಯು ಹೇಗೆ ಆಧಾರವೋ ಅದರಂತೆ ಜಗತ್ತೆಂಬ ವೃಕ್ಷಕ್ಕೆ ಪರಮಾತ್ಮನೇ ಆಧಾರನು.

ಪರಮಾತ್ಮನಿಗಿಂತ ಅರ್ವಾಚೀನ ಅಂದರೆ ಅನಂತರ ಹುಟ್ಟಿರುವ ಅರ್ಥಾತ್ ಪರಮಾತ್ಮನಿಗಿಂತ ಅಧಮರಾದ ದೇವತೆಗಳು ಈ ಜಗತ್ತೆಂಬ ವೃಕ್ಷಕ್ಕೆ ಕೋಂಬೆಗಳು. ಶಾಸ್ತ್ರಪ್ರಮಾಣದಿಂದ ಈ ಜಗತ್ತೆಂಬ ವೃಕ್ಷವು ಅಶ್ವತ್ಥ ವೃಕ್ಷದಂತೆ ಇದೆ ಎಂದು ತಿಳಿಯಬೇಕು. ಜಗತ್ತಿಗೆ ಅಶ್ವತ್ಥ ಎಂದು ಹೆಸರು ಹೇಗೆ ಸಲ್ಲುತ್ತದೆ ಎಂಬ ಶಂಕೆಯು ಬರಬಹುದು. ಅದಕ್ಕೆ ಹೀಗೆ ಸಮಾಧಾನವನ್ನು ತಿಳಿದುಕೊಳ್ಳಬೇಕು. ಅಶ್ವ ಅಂದರೆ ನಾರಾಯಣ ಎಂದು ಅರ್ಥ. (ಆಶು ಶೀಘ್ರಂ ವಾತಿ ಗಚ್ಛತಿ ಇತಿ ಶೀಘ್ರವಾದ ಗಮನವುಳ್ಳವನು ಎಂಬ ವಿಗ್ರಹದಿಂದ ಈ ಅರ್ಥ ಬರುತ್ತದೆ ಎಂದು ತಿಳಿಯಬೇಕು.) ಅಶ್ವ ಎಂಬ ಹೆಸರುಳ್ಳ ನಾರಾಯಣನು ಈ ಜಗತ್ತಿನಲ್ಲಿರುವುದರಿಂದ ಜಗತ್ತಿಗೆ ಅಶ್ವತ್ಥ ಎಂದು ಹೆಸರು. (ಅಶ್ವಃ ಅಸ್ಮಿನ್ ತಿಷ್ಠತಿ ಇತಿ ಅಶ್ವತ್ಥಃ ಎಂದು ವ್ಯುತ್ಪತ್ತಿಯನ್ನು ತಿಳಿಯಬೇಕು). ಅಥವಾ ಅಶ್ವ ಎಂಬ ಹೆಸರುಳ್ಳ ನಾರಾಯಣನಿಗೆ ಜಗತ್ತು ಅನ್ನವಾದುದರಿಂದ ಜಗತ್ತಿಗೆ ಅಶ್ವತ್ಥ ಎಂದು ಹೆಸರು ತಿಳಿಯಬೇಕು. (ಅಶ್ವಸ್ಯ ಥಂ ಅನ್ನಂ ಅಶ್ವತ್ಥಃ ಎಂದು ವಿಗ್ರಹ) ಇಂತಹ ಜಗತ್ತೆಂಬ ಅಶ್ವತ್ಥವು ಗಂಗಾ ಪ್ರವಾಹದಂತೆ ಅನಾದಿಯಾದುದು.

ಇಂತಹ ಜಗತ್ತಿಗೆ ಮೂಲವಾದ ಊರ್ಧ್ವ ಎಂಬ ಹೆಸರಿನಿಂದ ಹೇಳಿಸಿಕೊಂಡ ಪರಬ್ರಹ್ಮನಾದ ಹರಿಯೊಬ್ಬನೇ ದುಃಖರಹಿತನು, (ಶುಚಂ ರಹತಿ ತ್ಯಜತಿ ಇತಿ ಶುಕ್ರಂ ಎಂದು ವ್ಯುತ್ಪತ್ತಿ) ಶುಕ್ರನು. ಅವನೊಬ್ಬನೇ ಅಮೃತ ಸ್ವರೂಪನು. ಸಮಸ್ತ ಲೋಕಗಳೂ ಅಂತಹ ಪರಮಾತ್ಮನನ್ನೇ ಆಶ್ರಯಿಸಿರುತ್ತವೆ. ಯಾವನೂ ಅವನನ್ನು ಅತಿಕ್ರಮಿಸಿ, ಅವನ ಆಶ್ರಯ-ವಿಲ್ಲದೆ ಇರಲಾರನು. ನೀನು ಕೇಳಿದಂತಹ ಪರಬ್ರಹ್ಮವು ಇಂತಹ ಗುಣಗಳಿಂದ ಕೂಡಿದೆಯೆಂದು ತಿಳಿ ॥ 1 ॥

**ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಮ್ ।**
**ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ ಭವಂತಿ ॥ 2 ॥**

**ಯದಿದಮಿತಿ । ಯದಿದಂ ಕಿಂಚ ಸರ್ವಂ ಜಗತ್ ಪ್ರಾಣಾಖ್ಯೇ ಹರೌ ಸ್ಥಿತಂ ಪ್ರಾಣಾನ್ನಿಃಸೃತಂ ತದಿದಂ ಜಗತ್ ಯಸ್ಮಾದೇಜತಿ ಯತ್ಪ್ರೇರಣಯಾ ಚೇಷ್ಟತೇ ತತ್ ವಜ್ರಂ ವಜ್ರವತ್ ಮಹದ್ಭಯಂ ಮಹದ್ಭಯದಂ, ಉದ್ಯತಂ ಉತ್ಕೃಷ್ಟಯತ್ನವಂತಂ ಏತತ್ ಏತಂ ಯೇ ವಿದುಃ ತೇ ಅಮೃತಾಃ ಮುಕ್ತಾ ಭವಂತಿ । ಭಾಷ್ಯಟೀಕಯೋಸ್ತು, ಪ್ರಾಣಃ ಸರ್ವಮಿದಂ, ಕಿಂಚ ಜಗಚ್ಚ ಯಸ್ಮಾನ್ನಿಃಸೃತಂ ಏಜತಿ ಚೇಷ್ಟತೇ**

**ಚ, ಸರ್ವಂ ಜಗದ್ಯಸ್ಮಾನ್ನಿಃಸೃತಂ ಸ ಪ್ರಾಣೋ ಯಸ್ಮಾಚ್ಚೇಷ್ಟತ ಇತಿ ವಾಽರ್ಥಃ । ವಜ್ರಪದಸ್ಯ ತು ವರ್ಜನಾದ್ವಜ್ರಮುಚ್ಯತ ಇತಿ ಸ್ಮೃತ್ಯಾ ಯೋಗರೂಢಿಭ್ಯಾಂ ಚ ವಜ್ರಶಬ್ದಾರ್ಥೋ ಭಗವಾನಿತ್ಯುಕ್ತಮ್ । ತದಾಹ ಸೂತ್ರಕಾರಃ ಕಂಪನಾತ್ (ಬ್ರ. ಸೂ. 2-3-39) ಇತಿ ॥ 2 ॥**

ದೃಶ್ಯ ಅದೃಶ್ಯ ಮತ್ತು ಚರ ಅಚರ ಮೊದಲಾದ ಭೇದವುಳ್ಳ ಸಮಸ್ತ ಪ್ರಪಂಚವೂ ಪ್ರಾಣ ಎಂಬ ಹೆಸರುಳ್ಳ ಹರಿಯನ್ನೇ ಆಶ್ರಯಿಸಿ ಕೊಂಡಿದೆ. ಪ್ರಾಣನೆಂಬ ಹರಿಯಿಂದಲೇ ಉತ್ಪನ್ನವಾಗಿದೆ. ಅವನ ಪ್ರೇರಣೆಯಿಂದಲೇ ತನ್ನ ನಾನಾ ವಿಧವಾದ ಚೇಷ್ಟೆ ಅಂದರೆ ವ್ಯಾಪಾರವನ್ನು ಮಾಡುತ್ತದೆ. ಇಂತಹ ಪರಮಾತ್ಮನು ವಜ್ರದಂತೆ ಬಹಳ ಭಯವನ್ನುಂಟುಮಾಡು-ವವನಾಗಿರುತ್ತಾನೆ. ಪರಮಾತ್ಮನು ಯಾವಾಗಲೊ ಉತ್ಕೃಷ್ಟವಾದ ಪ್ರಯತ್ನವುಳ್ಳವನಾಗಿರುತ್ತಾನೆ. ಇಂತಹ ಪರಮಾತ್ಮನನ್ನು ಯಾರು ತಿಳಿಯುತ್ತಾರೋ ಅವರು ಮುಕ್ತರಾಗುತ್ತಾರೆ.

**ವಜ್ರವದ್ ಭಯದತ್ವಂ ಕುತ ಇತ್ಯತ ಆಹ- ಭಯಾತ್ ಇತಿ ।**

**ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ ।**
**ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥ 3 ॥**

**ಇಂದ್ರೋ ವಾಯುಃ, ಪಂಚಮೋ ಮೃತ್ಯುಃ ವರ್ಷಣಾದಿಸ್ವಕಾರ್ಯೇಷು ಧಾವತಿ ವ್ಯಾಪ್ರಿಯತೇ । ಧಾವು ಗತಿಶುದ್ಧ್ಯೋಃ ॥ 3 ॥**

ಪರಮಾತ್ಮನು ವಜ್ರದಂತೆ ಭಯವನ್ನುಂಟುಮಾಡುತ್ತಾನೆಂಬುದನ್ನೇ ವಿವರಿಸುತ್ತಾರೆ.

ಪರಮಾತ್ಮನ ಭಯದಿಂದಲೇ ಬೆಂಕಿಯು ಸುಡುತ್ತದೆ. ಸೂರ್ಯನು ತಾಪವನ್ನುಂಟುಮಾಡುತ್ತಾನೆ. ಇಂದ್ರ, ವಾಯು ಮತ್ತು ಐದನೆಯವನಾದ ಯಮನೂ ಸಹ ಪರಮಾತ್ಮನ ಹೆದರಿಕೆಯಿಂದಲೇ ತಮ್ಮ ತಮ್ಮ ಕಾರ್ಯದಲ್ಲಿ ವ್ಯಾಪೃತ-ರಾಗುತ್ತಾರೆ. ಎಲ್ಲಾ ಸಾತ್ತ್ವಿಕಜೀವರೂ ಪರಮಾತ್ಮನ ಆಜ್ಞಾನುವರ್ತಿಗಳಾಗಿ ತಮ್ಮ ತಮ್ಮ ಕಾರ್ಯವನ್ನು ಮಾಡುತ್ತಾರೆ ಎಂದು ತಾತ್ಪರ್ಯ ॥ 3 ॥

ಯಮರಾಜನು ಈ ರೀತಿ ಹೇಳುತ್ತಾನೆ-

---

★ ಸೂತ್ರ ಭಾಷ್ಯ ಟೀಕೆಗಳಲ್ಲಿ ಈ ಮಂತ್ರಕ್ಕೆ ಇನ್ನೊಂದು ಅರ್ಥವನ್ನು ಹೇಳುತ್ತಾರೆ. ಸರ್ವಜೀವೋತ್ತಮನಾದ ಮುಖ್ಯಪ್ರಾಣನು ಮತ್ತು ಈ ಸಮಸ್ತ ಜಗತ್ತೊ ಕೂಡ ಯಾವ ಪರಮಾತ್ಮನಿಂದ ಉಂಟಾಗಿದೆಯೋ, ಯಾವನಲ್ಲಿ ಸ್ಥಿತಿಯನ್ನು ಹೊಂದಿರುತ್ತದೆಯೋ ಅಂತಹ ಪರಮಾತ್ಮನು ಪೂಜ್ಯನೂ ಯಾವಾಗಲೂ ಎಲ್ಲಾ ಪ್ರಯತ್ನವುಳ್ಳವನೂ ಆಗಿದ್ದಾನೆ. ದೋಷವರ್ಜಿತನಾದು-ದರಿಂದಲೋ ಮತ್ತು ಅಪ್ರಿಯರಹಿತನಾದುದರಿಂದಲೋ ಅವನಿಗೆ ವಜ್ರ ಎಂದು ಹೆಸರು. ಅವನು ದುಷ್ಟರಿಗೆ ಬಹಳ ಭಯಪ್ರದನೂ ಆಗಿರುತ್ತಾನೆ. (ವರ್ಜನಾತ್ ವಜ್ರಂ ಎಂದು ವ್ಯುತ್ಪತ್ತಿ) ದುರ್ಜನರನ್ನು ದೂರಮಾಡಿರುವುದರಿಂದಲೂ ಪರಮಾತ್ಮನಿಗೆ ವಜ್ರ ಎಂದು ಹೆಸರು ॥

★ ಓಂ ಕಂಪನಾತ್ ಓಂ ಬ್ರ. ಸೂ.ಪ್ರ. ಅ. 2 ಪಾದ 39 ಸೂತ್ರ. ಅಧಿ. 10 ಈ ಸೂತ್ರದಲ್ಲಿ ಮಹದ್ಭಯಂ ವಜ್ರಮುದ್ಯತಂ ಎಂದು ಕಾಠಕದಲ್ಲಿ ಹೇಳಿರುವ ವಜ್ರನು ಪರಮಾತ್ಮನು. ಏಕೆಂದರೆ ಜಗತ್ಸರ್ವಂ ಎಂಬ ಶ್ರುತಿಯಲ್ಲಿ ಪ್ರಾಣಾದಿಸರ್ವಜಗಚ್ಚೇಷ್ಟಕತ್ವವನ್ನು ಪರಮಾತ್ಮನಿಗೇ ಹೇಳುತ್ತಾರೆ, ಎಂದು ನಿರ್ಣಯಿಸುತ್ತಾರೆ.

ನಚಿಕೇತನೇ, ಬಾಲ್ಯದಲ್ಲಿಯೇ ನೀನು ಅತ್ಯುತ್ತಮವಾದ ಬ್ರಹ್ಮಜ್ಞಾನವನ್ನು ಸಂಪಾದಿಸಿರುತ್ತೀ, ಇದು ಬಹಳ ವಿಸ್ಮಯಕರವಾದುದು. ಇತರ ಬಾಲಕರು ನಿನ್ನಂತಯೇ ಬಾಲ್ಯದಲ್ಲಿ ಬ್ರಹ್ಮಜ್ಞಾನವನ್ನು ಸಂಪಾದಿಸಬೇಕು. ಬ್ರಹ್ಮಜ್ಞಾನಕ್ಕೆ ಫಲವಾದರೋ ಶಾಶ್ವತವಾದ ಮೋಕ್ಷ.

ಈ ಅಭಿಪ್ರಾಯವನ್ನೇ ಈ ಕೆಳಗಣ ಮಂತ್ರವು ಹೇಳುತ್ತದೆ.

**ಬಾಲ್ಯ ಏವ ಸಂಪಾದಿತಜ್ಞಾನಂ ನಚಿಕೇತಸಂ ದೃಷ್ಟ್ವಾ ವಿಸ್ಮಿತೋನ್ಯೋಽಪ್ಯೇವಂ ಕುರ್ಯಾದಿತ್ಯಾ-ಶಯವಾನ್ ತಥಾ ಕರ್ತುಃ ಫಲಮಾಹ ಇಹ ಚೇತ್ ಇತಿ ।**

**ಇಹ ಚೇದಶಕದ್ ಬೋದ್ಧುಂ ಪ್ರಾಕ್ಶರೀರಸ್ಯ ವಿಸ್ರಸಃ ।**
**ತತಃ ಸ್ವರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ ॥ 4 ॥**

**ಇಹ ಮನುಷ್ಯದೇಹೇ ಶರೀರಸ್ಯ ಭೌತಿಕದೇಹಸ್ಯ ವಿಸ್ರಸಃ ವಿಸ್ರಂಸನಾತ್ ಪತನಾವಸ್ಥಾನಾತ್ ಪ್ರಾಕ್ ಬೋದ್ಧುಮಶಕತ್ ಶಕ್ತಶ್ಚೇತ್ ಸಃ ಸ್ವರ್ಗೇಷು ಲೋಕೇಷು ವೈಕುಂಠಾದಿಷು ಶರೀರತ್ವಾಯ ಅಪ್ರಾಕೃತ-ಚಿದಾನಂದಾತ್ಮಕದೇಹವತ್ತ್ವಾಯ ಕಲ್ಪತೇ, ಮುಕ್ತೋ ಭವತೀತಿ ಯಾವತ್ ॥ 4 ॥**

ನಚಿಕೇತನೇ, ಈ ಮನುಷ್ಯರ ಶರೀರವೆಲ್ಲವೂ ಪಂಚಭೂತನಿರ್ಮಿತವಾದುದು. ಇದು ಶಿಥಿಲವಾಗಿ ಬಿದ್ದುಹೋಗುವ ಮೊದಲೇ ಪರಮಾತ್ಮನ ಜ್ಞಾನವನ್ನು ಸಂಪಾದಿಸಲು ಮನುಷ್ಯನು ಶಕ್ತನಾಗಬೇಕು. ಹಾಗೆ ಮಾಡಿದರೆ ಅಂತಹ ಜ್ಞಾನಿಯು ವೈಕುಂಠಾದಿ ಲೋಕಗಳಲ್ಲಿ ಅಪ್ರಾಕೃತವಾದ ಜ್ಞಾನಾನಂದಮಯವಾದ ಶರೀರವನ್ನು ಹೊಂದಲು ಸಮರ್ಥನಾಗುತ್ತಾನೆ. ಅಂದರೆ ಮುಕ್ತನಾಗುತ್ತಾನೆಂದು ತಿಳಿ. ಪಾಂಚಭೌತಿಕವಾದ ನಶ್ವರದೇಹದಲ್ಲಿ ಮಮತೆಯನ್ನು ಬಿಟ್ಟು ಬ್ರಹ್ಮಜ್ಞಾನವನ್ನು ಸಂಪಾದಿಸಿದರೆ ಜ್ಞಾನಾನಂದಮಯವಾದ ದೇಹವು ಸಿಗುತ್ತದೆ. ಕಡಿಮೆ ಬೆಲೆಯ ವಸ್ತುವನ್ನು ಕಳೆದುಕೊಂಡರೂ ಅತ್ಯಮೂಲ್ಯವಾದ ವಸ್ತುವನ್ನು ನಾವು ಪಡೆಯುವುದರಿಂದ ಇದು ಮಹಾಲಾಭವಲ್ಲವೇ ?

**ಉಕ್ತೋಪಾಯೈರ್ಜಾಯಮಾನೋಽಪಿ ಭಗವದ್ಬೋಧೋ ನೈಕವಿಧ ಇತ್ಯಾಹ- ಯಥೇತಿ ।**

**ಯಥಾಽಽದರ್ಶೇ ತಥಾಽಽತ್ಮನಿ, ಯಥಾ ಸ್ವಪ್ನೇ ತಥಾ ಪಿತೃಲೋಕೇ ।**
**ಯಥಾಽಪ್ಸು ಪರೀವ ದೃಶ್ಯತೇ ತಥಾ ಗಂಧರ್ವಲೋಕೇ ।**
**ಛಾಯಾತಪಯೋರಿವ ಬ್ರಹ್ಮಲೋಕೇ ॥ 5 ॥**

**ಆತ್ಮನಿ ಜೀವೇಽವಸ್ಥಿತೋ ಭಗವಾನ್, ಆದರ್ಶೇ ದರ್ಪಣೇ ಮುಖಂ ಯಥಾ ದೃಶ್ಯತೇ ಸಮ್ಯಕ್ ತಥಾ ಜ್ಞಾನದೃಷ್ಟಿಭಿಃ ದೃಶ್ಯತೇ । ಯಥಾ ಸ್ವಪ್ನೇ ಪದಾರ್ಥೋ ದೃಶ್ಯತೇ ಸಮ್ಯಕ್ ತಥಾ ಪಿತೃಲೋಕೇ ದೃಶ್ಯತೇ ನ ಸಮ್ಯಗಿತ್ಯರ್ಥಃ । ಯಥಾಽಪ್ಸು ಪರೀವ ಸಮ್ಯಗಿವ, ಪ್ರತಿಮುಖಾದಿಕಂ ದೃಶ್ಯತೇ ತಥಾ ಗಂಧರ್ವಲೋಕೇ ಕಿಂಚಿತ್ಸ್ಪಷ್ಟತಯಾ ದೃಶ್ಯತೇ । ಬ್ರಹ್ಮಲೋಕೇ ತು ಛಾಯಾತಪಯೋಃ ಛಾಯಾತಪ-ಮಿಲಿತಪ್ರದೇಶೇ ವಸ್ತು ಯಥಾಽಹನಿ ದೃಶ್ಯತೇ ತಥಾ ಹರಿರ್ದೃಶ್ಯತ ಇತ್ಯರ್ಥಃ ॥ 5 ॥**

ನಚಿಕೇತನೇ, ಹಿಂದೆ ಹೇಳಿದ ಉಪಾಯಗಳಿಂದ ಉಂಟಾಗತಕ್ಕ ಬ್ರಹ್ಮಜ್ಞಾನವು ಎಲ್ಲರಿಗೂ ಒಂದೇ ವಿಧವಾಗಿರುತ್ತ-ದೆಂದು ತಿಳಿಯಬೇಡ. ಅವರವರ ಯೋಗ್ಯತಾನುಸಾರವಾಗಿ ಬ್ರಹ್ಮಜ್ಞಾನವು ನಾನಾ ವಿಧವಾಗಿರುತ್ತದೆ ಎಂದು ತಿಳಿ. ಅದು ಹೇಗೆಂಬುದನ್ನು ವಿವರಿಸಿ ತಿಳಿಸುತ್ತೇನೆ ಕೇಳು

ಜೀವರಲ್ಲಿರುವ ಪರಮಾತ್ಮನು ಕನ್ನಡಿಯಲ್ಲಿ ಮುಖವು ಚೆನ್ನಾಗಿ ಕಾಣಿಸುವಂತೆ ಅಪರೋಕ್ಷಜ್ಞಾನಗಳೆಂಬ ಕಣ್ಣುಗಳಿಂದ ಚೆನ್ನಾಗಿ ಕಾಣಿಸುತ್ತಾನೆ.

ಸ್ವಪ್ನದಲ್ಲಿ ಪದಾರ್ಥವು ಹೇಗೆ ಕಾಣಿಸುತ್ತದೆಯೋ ಅದರಂತೆ ಪಿತೃ ಲೋಕದಲ್ಲಿ ಅಸ್ಪಷ್ಟವಾಗಿ ಕಾಣಿಸುತ್ತಾನೆ.

ಬ್ರಹ್ಮಲೋಕದಲ್ಲಿ ಯಾದರೋ, ಬಿಸಿಲು ಕಾಯುತ್ತಿರುವಾಗ ನೆರಳಿನಲ್ಲಿ ನಿಂತವನಿಗೆ ಹಗಲಿನಲ್ಲಿ ವಸ್ತುಗಳು ಹೇಗೆ ಸ್ಪಷ್ಟವಾಗಿ ಕಾಣಿಸುತ್ತವೆಯೋ ಅದರಂತೆ ಸ್ಪಷ್ಟವಾಗಿ ಪರಬ್ರಹ್ಮರೂಪಿಯಾದ ಹರಿಯು ಕಾಣಿಸುತ್ತಾನೆ.

**ಇಹ ಚೇದಶಕತ್ಬೋದ್ಧುಮಿತ್ಯುಕ್ತಮ್ । ತತ್ರ ಕಸ್ಯ ಬೋಧಾತ್ ಸ್ವರ್ಗಲೋಕೋ ಭವತೀತ್ಯತೋ ಬೋದ್ಧವ್ಯಮಾಹ- ಇಂದ್ರಿಯಾಣಾಮಿತಿ ।**

**ಇಂದ್ರಿಯಾಣಾಂ ಪೃಥಗ್ಭಾವಮ್ ಉದಯಾಸ್ತಮಯೌ ಚ ಯತ್ ।**
**ಪೃಥಗುತ್ಪದ್ಯಮಾನಾನಾಂ ಮತ್ವಾ ಧೀರೋ ನ ಶೋಚತಿ ॥ 6 ॥**

**ಪೃಥಗ್‌ಭಾವಂ ತಾರತಮ್ಯಂ, ಯಚ್ಚ ಜಗದುದಯಾಸ್ತಮಯೌ ಭವತಃ, ಪೃಥಕ್ ನಾನಾ-ಪ್ರಕಾರೇಣ ಉತ್ಪದ್ಯಮಾನಾನಾಂ ಇಂದ್ರಿಯಾಣಾಂ ಸತ್ತಾಪ್ರತೀತ್ಯಾದಿಕಮಿತಿ ಶೇಷಃ । ಮತ್ವಾ ಭಗವದಧೀನಂ ಜ್ಞಾತ್ವಾ, ನ ಶೋಚತಿ ॥ 6 ॥**

ನಚಿಕೇತನು ಕೇಳುತ್ತಾನೆ, ಗುರುದೇವ ! ಈ ಜನ್ಮದಲ್ಲಿಯೇ ತಿಳಿದರೆ ಸ್ವರ್ಗ (ವೈಕುಂಠ) ಲೋಕದಲ್ಲಿ ಉತ್ತಮ ಶರೀರ ಉಂಟಾಗುತ್ತದೆ ಎಂದಿರಲ್ಲ ? ಯಾವುದರ ತಿಳುವಳಿಕೆಯಿಂದ ಆ ಸ್ವರ್ಗಲೋಕವು ಬರುತ್ತದೆ ?

ಯಮ :- ಇಂದ್ರಿಯಗಳ ಅಭಿಮಾನಿದೇವತೆಗಳಲ್ಲಿ ಪರಸ್ಪರ ತಾರತಮ್ಯವಿದೆ. ಅದು ಭಗವಂತನ ಅಧೀನವೆಂದು ತಿಳಿಯಬೇಕು. ಮತ್ತು ಇಂದ್ರಿಯ ಮತ್ತು ಇಂದ್ರಿಯಾಭಿಮಾನಿದೇವತೆಗಳಿಂದ ಸಹಿತವಾದ ಈ ಜಗತ್ತಿನ ಉತ್ಪತ್ತಿ ಲಯಗಳು, ಸತ್ತಾ (ಇರುವಿಕೆ), ಪ್ರತೀತಿ (ಜ್ಞಾನ) ಮತ್ತು ಪ್ರವೃತ್ತಿ (ಚೇಷ್ಟೆ)ಗಳು ಪರಮಾತ್ಮನ ಅಧೀನವೆಂದು ತಿಳಿಯಬೇಕು. ಇದನ್ನು ತಿಳಿದರೆ ಶೋಕ ಉಂಟಾಗುವುದಿಲ್ಲ, ಹಿಂದೆ ಹೇಳಿದಂತೆ ಸ್ವರ್ಗಲೋಕ ಪ್ರಾಪ್ತಿಯಾಗುತ್ತದೆ. ಇದೇ ಮೋಕ್ಷಕ್ಕೆ ಬೇಕಾದ ತಿಳುವಳಿಕೆಯು. ॥ 6 ॥

ಇಷ್ಟೇ ಅಲ್ಲ, ತಾರತಾಮ್ಯದ ಕೊನೆಯಲ್ಲಿ ಸರ್ವೋತ್ತಮನಾದ ನಾರಾಯಣನಿರುವನೆಂದೂ ತಿಳಿಯಬೇಕು. ಅದು ಹೇಗೆಂದರೆ ಹೇಳುತ್ತೇನೆ, ಕೇಳು –

**ನೈತಾವದೇವ ಕಿಂತು ತಾರತಮ್ಯಾಂತಗತ್ವೇನ ಭಗವಜ್ಜ್ಞಾನಮಾವಶ್ಯಕಮಿತ್ಯಾಹ - ಇಂದ್ರಿಯೇಭ್ಯ ಇತ್ಯಾದಿನಾ ।**

**ಇಂದ್ರಿಯೇಭ್ಯಃ ಪರಂ ಮನೋ ಮನಸಃ ಸತ್ತ್ವಮುತ್ತಮಮ್ ।**
**ಸತ್ವಾದಧಿ ಮಹಾನಾತ್ಮಾ ಮಹತೋಽವ್ಯಕ್ತಮುತ್ತಮಮ್ ॥ 7 ॥**

**ಅವ್ಯಕ್ತಾತ್ತು ಪರಃ ಪುರುಷೋ ವ್ಯಾಪಕೋಽಲಿಂಗ ಏವ ಚ ।**
**ತಂ ಜ್ಞಾತ್ವಾ ಮುಚ್ಯತೇ ಜಂತುರಮೃತತ್ವಂ ಚ ಗಚ್ಛತಿ ॥ 8 ॥**

**ಇಂದ್ರಿಯಾದಿದೇವತಾಃ ಪ್ರಾಕ್ ತೃತೀಯೇ ಪ್ರದರ್ಶಿತಾಃ । ಸತ್ತ್ವಂ ಬುದ್ಧಿಃ । ಅಧಿ ಅಧಿಕಃ । ವ್ಯಾಪಕೋಽಪರಿಚ್ಛಿನ್ನಃ । ಅಲಿಂಗಃ ಪ್ರಾಕೃತಭೌತಿಕದೇಹರಹಿತಃ । ವಿಶೇಷಣಸಮುಚ್ಚಯೇ ಚಶಬ್ದಃ । ತಂ ತಾರತಮ್ಯಾಂತಗಂ ಜ್ಞಾತ್ವಾ ಮುಚ್ಯತೇ ಭವಪಾಶಾತ್ । ಅಮೃತತ್ವಂ ಚ ಪುನರ್ಜನನಮರಣಾದಿ-ಭಾವರೂಪಂ ಅಮೃತತ್ವಂ ಚ ಗಚ್ಛತೀತ್ಯರ್ಥಃ । ಪ್ರಾಕ್‌ಉಕ್ತಸ್ಯೈವ ತಾರತಮ್ಯಸ್ಯ ಪುನರಿಹವಚನಂ ತಾರತಮ್ಯಜ್ಞಾನಪೂರ್ವಕಂ ಭಗವತಃ ಸರ್ವೋತ್ತಮತ್ವಜ್ಞಾನ ಏವ ಸರ್ವವಾಕ್ಯಾನಾಂ ಮಹಾ-ತಾತ್ಪರ್ಯಮಿತಿ ಜ್ಞಾಪಯಿತುಮ್ ॥ 7 ॥ 8 ॥**

ಶ್ರೋತ್ರ (ಕಿವಿ), ತ್ವಗಿಂದ್ರಿಯ, ಚಕ್ಷುಸ್ (ಕಣ್ಣು) ರಸನಾ (ನಾಲಿಗೆ), ಘ್ರಾಣ (ಮೂಗು), ವಾಗಿಂದ್ರಿಯ, ಪಾಣಿ (ಕೈ), ಪಾದ (ಕಾಲು), ಪಾಯು (ಮಲವಿಸರ್ಜನೇಂದ್ರಿಯ), ಉಪಸ್ಥ (ಗುಹ್ಯೇಂದ್ರಿಯ) ಇವುಗಳಿಗೆ ನಿಯಾಮಕರಾಗಿ ಆಯಾ ಹೆಸರಿನ ದೇವತೆಗಳಿರುತ್ತಾರೆ. ಅವರು ಕ್ರಮವಾಗಿ ಸೋಮ, ಕುಬೇರ, ಸೂರ್ಯ, ವರುಣ, ಅಶ್ವಿನೀ ದೇವತೆಗಳು, ಅಗ್ನಿ, ಇಂದ್ರ, ಜಯಂತ, ಯಮ, ದಕ್ಷ ಎಂಬ ದೇವತೆಗಳು ಇವರಿಗಿಂತಲೂ ಮನೋಭಿಮಾನಿಗಳಾದ ರುದ್ರದೇವರು ಉತ್ತಮರು. ಮನೋಽಭಿಮಾನಿ ದೇವತೆಗಿಂತಲೂ ಸತ್ತ್ವ ಎಂದರೆ ಬುದ್ಧಿಗೆ ಅಭಿಮಾನಿಯಾದ ಸರಸ್ವತಿ ಉತ್ತಮಳು. ಈ ಸರಸ್ವತಿಗಿಂತಲೂ ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖ ಬ್ರಹ್ಮದೇವರು ಉತ್ತಮರು. ಅವರಿಗಿಂತಲೂ ಅವ್ಯಕ್ತ-ತ್ತ್ವಾಭಿಮಾನಿಯಾದ ರಮಾ ದೇವಿಯು ಉತ್ತಮಳು. ಅವಳಿಗಿಂತಲೂ ಅಪರಿಚ್ಛಿನ್ನ ಅಂದರೆ ಇತಿಮಿತಿಗೆ ಒಳಪಡದ, ಮತ್ತು ಪ್ರಾಕೃತ ಭೌತಿಕ ದೇಹರಹಿತನಾದ ಷಡ್ಗುಣೈಶ್ವರ್ಯ ಪರಿಪೂರ್ಣನಾದ ನಾರಾಯಣನು ಉತ್ತಮನು. ತಾರತಮ್ಯದ ಕೊನೆಯಲ್ಲಿ (ಉಚ್ಚಸ್ಥಾನದಲ್ಲಿ) ಹೀಗೆ ನಾರಾಯಣನು ಇರುವನೆಂದು ತಿಳಿದ ಜ್ಞಾನಿಯು ಸಂಸಾರಪಾಶದಿಂದ ಬಿಡುಗಡೆ ಹೊಂದುತ್ತಾನೆ. ಅಮೃತತ್ವ ಅಂದರೆ ಪುನಃ ಜನನಮರಣಗಳಿಲ್ಲದಿರುವ ಮೋಕ್ಷವನ್ನೇ ಹೊಂದುತ್ತಾನೆ.★

**ತಂ ಜ್ಞಾತ್ವಾ ಮುಚ್ಯತೇ ಇತ್ಯುಕ್ತಂ ಮುಕ್ತಿಹೇತುಜ್ಞಾನಂ ನ ಚಕ್ಷುರಾದೀನಾಂ ಅನಾಯಾಸಸಾಧ್ಯಂ, ಕಿಂತು ಭಕ್ತಿಶ್ರವಣಾದ್ಯುಪೋದ್ಬಲಿತೇನ ಮನಸೈವೇತ್ಯಾಹ - ನ ಸಂದೃಶ ಇತಿ ।**

**ನ ಸಂದೃಶೇ ತಿಷ್ಠತಿ ರೂಪಮಸ್ಯ**
**ನ ಚಕ್ಷುಷಾ ಪಶ್ಯತಿ ಕಶ್ಚಿದೇನಮ್ ।**

---

★ ಹಿಂದೆ ಪ್ರಥಮಾಧ್ಯಾಯದ ತೃತೀಯವಲ್ಲಿಯಲ್ಲಿ (10, 11ನೆಯ ಮಂತ್ರಗಳು) ಹೇಳಿದ ತಾರತಮ್ಯವನ್ನೇ ಪುನಃ ಹೇಳಿರುವುದು, ತಾರತಮ್ಯ ಜ್ಞಾನಸಹಿತವಾಗಿ ಶ್ರೀಹರಿಯನ್ನು ಸರ್ವೋತ್ತಮನೆಂದು ತಿಳಿಸುವುದರಲ್ಲಿಯೇ ಎಲ್ಲಾ ಶಾಸ್ತ್ರಗಳಿಗೂ ಮಹಾ-ತಾತ್ಪರ್ಯವಿದೆಯೆಂದು ತಿಳಿಸುವುದಕ್ಕಾಗಿ ಎಂದು ತಿಳಿಯಬೇಕು.

ಹೃದಾ ಮನೀಷಾ ಮನಸಾऽಭಿಕ್ಲೃಪ್ತೋ
ಯ ಏನಂ ವಿದುರಮೃತಾಸ್ತೇ ಭವಂತಿ ॥ 9 ॥

ಸಂದೃಶೇ ಸಮ್ಯಕ್‌ಜ್ಞಾನಾಯ । ಅಸ್ಯ ನಾನಾವತಾರನಿದಾನಭೂತಸ್ಯ ಮೂಲರೂಪಸ್ಯ ಪ್ರಕೃತ-ಭಗವತೋ ರೂಪಂ ನ ತಿಷ್ಠತಿ । ಅವ್ಯಕ್ತೈಕಸ್ವಭಾವತ್ವಾತ್, ಅಚಿಂತ್ಯಮಹಿಮತ್ವಾಚ್ಚ , ವಸ್ತುಸ್ವಭಾವೋ ದುರ್ದರ್ಶ ಇತ್ಯುಕ್ತತ್ವಾತ್ ಕರಣಾನ್ಯಪಿ ನ ತತ್ರ ಶಕ್ತಿಮಂತೀತ್ಯಾಹ - ನ ಚಕ್ಷುಷೇತಿ । ಉಪಲಕ್ಷಣಮ್ । ಚಕ್ಷುರಾದಿಕರಣೈಃ ಕಶ್ಚಿದಪ್ಯೇನಂ ನ ಪಶ್ಯತಿ । ಏತೇನ ಮತ್ಸ್ಯಕೂರ್ಮಾದೇಶ್ಚಕ್ಷುಷಾ ದರ್ಶನಾನ್ನ ಚಕ್ಷುಷಾ ಪಶ್ಯತೀತಿ ಕಥಮಿತಿ ಪರಾಸ್ತಮ್ । ಮೂಲರೂಪಸ್ಯೈವಂಭಾವೋಕ್ತೇಃ । ತರ್ಹಿ ಕೇನೇತ್ಯತ ಆಹ- ಹೃದೇತಿ । ಹೃಚ್ಛಬ್ದೋऽತ್ರ ಶ್ರವಣಮನನಧ್ಯಾನಭಕ್ತ್ಯಾದಿಸಾಧನಪರಃ । ತದ್ಯುಕ್ತೇನ ಮನಸಾ ಮನೀಷಾ ಜ್ಞಾನರೂಪೋ ಭಗವಾನ್ ಅಭಿಕ್ಲೃಪ್ತೋ ವಿಷಯೀಕೃತೋ ಭವತಿ । ಮುಚ್ಯತೇ ಮುಕ್ತೋ ಭವತೀತಿ ಪ್ರಾಕ್ ಏಕವಚನೋಕ್ತ್ಯಾ ಜ್ಞಾನಿಷ್ವೇಕ ಏವ ಮುಚ್ಯತ ಇತಿ ಪ್ರಾಪ್ತಶಂಕಾಂ ವಾರಯಿತು-ಮಾಹ- ಯ ಏನಮಿತಿ । ಏನಂ ಪುರುಷಮ್ । ತಥಾ ಚ ಸೂತ್ರಂ 'ಅನಿಯಮಃ ಸರ್ವೇಷಾಮ್' (ಬ್ರ.ಸೂ. 3-3-35) ಇತಿ ॥ 9 ॥

ನಚಿಕೇತ ! ಮೋಕ್ಷಕ್ಕೆ ಕಾರಣವಾದ ತತ್ತ್ವಜ್ಞಾನವು ಯಾವುದೆಂದು ಹಿಂದೆ ಹೇಳಿದ್ದಾಯಿತು. ಆದರೆ ಈ ಜ್ಞಾನವು ಚಕ್ಷುರಾದಿ ಇಂದ್ರಿಯಗಳಿಂದ ಸುಲಭಸಾಧ್ಯವೆಂದು ತಿಳಿಯಬೇಡ. ಭಕ್ತಿ ಮತ್ತು ಶ್ರವಣಾದಿಗಳ ಬಲದಿಂದ ಸಹಿತವಾದ ಮನಸ್ಸಿನಿಂದಲೇ ಪರಮಾತ್ಮನನ್ನು ತಿಳಿಯಬೇಕು.

ಮತ್ಸ್ಯ, ಕೂರ್ಮಾದಿ ಅನಂತ ಅವತಾರಗಳಿಗೆ ಕಾರಣವಾಗಿರುವ ಪರಮಾತ್ಮನ ಸ್ವರೂಪವು ಸರಿಯಾದ ತಿಳುವಳಿಕೆಗೆ ಗೋಚರವಾಗುವಂತಹದು. ಹೀಗೆ ಪರಮಾತ್ಮನೆಂಬ ವಸ್ತುವೇ ಸ್ವತಃ ಅವ್ಯಕ್ತ ಸ್ವಭಾವವುಳ್ಳದ್ದು. ಆದುದರಿಂದ ಅದರ ಸಮೀಚೀನವಾದ ಜ್ಞಾನವು ಆಗಲಾರದೆಂದು ತಿಳಿಯಬೇಕು.

ಆ ಪರಮಾತ್ಮನನ್ನು ಯಾವ ಕರಣಗಳೂ (ಇಂದ್ರಿಯಗಳು) ಸರಿಯಾಗಿ ತಿಳಿಸಿಕೊಡಲಾರವು – ಕಣ್ಣುಮೊದಲಾದ ಯಾವ ಇಂದ್ರಿಯದಿಂದಲೂ ಪರಮಾತ್ಮನನ್ನು ಯಾವನೂ ತಿಳಿಯಲಾರನು. ಮತ್ಸ್ಯಕೂರ್ಮಾದಿ ರೂಪಗಳನ್ನು ನಾವು ಇಂದ್ರಿಯಗಳಿಂದ ತಿಳಿಯಬಹುದಾದರೂ ಮೂಲರೂಪವನ್ನು ತಿಳಿಯಲಾರವು. ಮೂಲರೂಪದ ಸರಿಯಾದ ಅಪರೋಕ್ಷಜ್ಞಾನವೇ ಮೋಕ್ಷಕ್ಕೆ ಕಾರಣವು.

ಅಂತಹ ಅಪರೋಕ್ಷಜ್ಞಾನವು ಯಾವುದರಿಂದ ಉಂಟಾಗುತ್ತದೆ ಎಂದರೆ ಶ್ರವಣ (ಗುರುಗಳ ಮೂಲಕ ಶಾಸ್ತ್ರಗಳನ್ನು ಅಭ್ಯಾಸಮಾಡುವುದು) ಮನನ (ತಿಳಿದ ವಿಷಯವನ್ನು ಯುಕ್ತಿಗಳಿಂದ ಪುನಃ ಪುನಃ ಚಿಂತಿಸುವುದು) ನಿದಿಧ್ಯಾಸನ (ಧ್ಯಾನ) ಇವುಗಳಿಂದ ಸಹಿತವಾದ, ದೃಢಭಕ್ತಿಯುತವಾದ ಮನಸ್ಸಿನಿಂದ ಜ್ಞಾನರೂಪಿಯಾದ ಪರಮಾತ್ಮನನ್ನು ಗೋಚರಿಸಲು ಸಾಧ್ಯ. ಬೇರೆ ಯಾವ ಉಪಾಯವೂ ಇಲ್ಲ.

ಹಿಂದೆ ಜ್ಞಾನಿಯು ಮುಕ್ತನಾಗುತ್ತಾನೆ ಎಂದು ಹೇಳಿದ್ದರಿಂದ (8ನೇ ಮಂತ್ರ ಇದೇ ವಲ್ಲಿ) ಒಬ್ಬ ಜ್ಞಾನಿಯು ಮಾತ್ರವೇ ಮುಕ್ತನಾಗುತ್ತಾನೆ ಎಂದು ಅರ್ಥಮಾಡಬಾರದು.

ಪುರುಷ ಎಂಬ ಹೆಸರುಳ್ಳ ಪರಮಾತ್ಮನನ್ನು ಯಾರು ಅಪರೋಕ್ಷಜ್ಞಾನದಿಂದ ತಿಳಿಯುತ್ತಾರೋ ಅವರೆಲ್ಲರೂ ಮುಕ್ತರಾಗುತ್ತಾರೆಂದು ತಿಳಿಯಬೇಕು.★

**ಹೃದಾ ಮನಸೇತ್ಯತ್ರ ಹೃದೇತ್ಯುಕ್ತಸಾಧನೇಷು ಅಭ್ಯರ್ಹಿತಂ ಜ್ಞಾನಸಾಧನಂ ಕಿಮಿತ್ಯತಃ ಪ್ರತ್ಯಾಹಾರಸಿದ್ಧಧಾರಣಾದಿರೂಪಂ ಧ್ಯಾನಮಿತ್ಯಾಹ- ಯದೇತಿ ।**

**ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ ।**
**ಬುದ್ಧಿಶ್ಚನ ವಿಚೇಷ್ಟತಿ ತಾಮಾಹುಃ ಪರಮಾಂ ಗತಿಮ್ ॥ 10 ॥**

**ಜ್ಞಾನಾನಿ, ಕರಣೇ ಲ್ಯುಟ್, ಜ್ಞಾನಸಾಧನಾನಿ ಚಕ್ಷುರಾದಿಪಂಚೇಂದ್ರಿಯಾಣಿ ಮನಸಾ ಸಹ ಯದಾಽವತಿಷ್ಠಂತೇ ವಿಷಯೇಭ್ಯಃ ವ್ಯಾವೃತ್ತತಯಾ ತಿಷ್ಠಂತಿ, ಬುದ್ಧಿಶ್ಚ ನ ವಿಚೇಷ್ಟತೇ ವಿಷಯಾನ್ ಪ್ರತಿ ನ ಪ್ರವರ್ತನೇ, ತಂ ಸಪ್ತಾನಾಂ ಇಂದ್ರಿಯಾಣಾಂ ವಿಷಯೇಭ್ಯಃ ಪ್ರತ್ಯಾಹಾರಂ ಪರಮಾಂ ಗತಿಂ ಪರಮಸಾಧನಂ ಜ್ಞಾನಸ್ಯಾಹುರಿತ್ಯರ್ಥಃ । ತಾಮಿತಿ ಪಾಠೇ ಗತ್ಯಪೇಕ್ಷಯಾ ಸ್ತ್ರೀಲಿಂಗತ್ವಮ್ ॥ 10 ॥**

ಮನಸ್ಸು ಮತ್ತು ಶ್ರವಣ ಮನನ ಧ್ಯಾನ ಭಕ್ತಿಗಳೆಂಬ ಹಿಂದೆ ಹೇಳಿದ ಅಪರೋಕ್ಷಜ್ಞಾನ ಸಾಧನಗಳಲ್ಲಿ ಯಾವುದು ಶ್ರೇಷ್ಠವಾದುದು ಎಂಬ ಪ್ರಶ್ನೆಗೆ ಇಲ್ಲಿ ಯಮದೇವರು ಉತ್ತರ ಕೊಡುತ್ತಿದ್ದಾರೆ. ಪ್ರತ್ಯಾಹಾರವೆಂಬ ಯೋಗಾಂಗದ ಅನುಷ್ಠಾನದಿಂದ ಸಿದ್ಧವಾದ ಧಾರಣಾ, ಸಮಾಧಿ, ಇತ್ಯಾದಿ ರೂಪದಿಂದ ಇರುವ ಧ್ಯಾನವೇ ಮುಖ್ಯಸಾಧನವು. ಅದು ಹೇಗೆಂದರೆ –

ಜೀವನಿಗೆ ಜ್ಞಾನವನ್ನುಂಟುಮಾಡುವ ಚಕ್ಷುಸ್ ಮುಂತಾದ ಐದು ಜ್ಞಾನೇಂದ್ರಿಯಗಳಿವೆ. ಅವೆಲ್ಲವೂ ಯಾವಾಗ ವಿಷಯಗಳ ಕಡೆಗೆ ಹೋಗದೇ ಮನಸ್ಸಿನೊಡನೆ ಅಂತರ್ಮುಖವಾಗಿರುತ್ತವೆಯೋ ಮತ್ತು ಬುದ್ಧಿಯು ವಿಷಯಗಳ ಕಡೆಗೆ ಪ್ರವರ್ತಿಸುವುದಿಲ್ಲವೋ ಅಂತಹ ಸ್ಥಿತಿಯೇ ಪರಮಸಾಧನವು. ಹಿಂದೆ ಹೇಳಿದ ಏಳು ಇಂದ್ರಿಯಗಳನ್ನೂ ವಿಷಯಗಳಿಂದ ವಿಮುಖವಾಗಿ ಮಾಡುವುದೇ ಮೋಕ್ಷಕ್ಕೆ ಪರಮಸಾಧನವು. (ಇದು ಪ್ರತ್ಯಾಹಾರ ರೂಪವಾಗುತ್ತದೆ).

**ನನು ಕಥಂ ಪ್ರತ್ಯಾಹಾರಸ್ಯ ಪರಮಸಾಧನತಾ ? ಧ್ಯಾನಸಮಾಧಿಲಕ್ಷಣಯೋಗಸ್ಯೈವ ತಥಾತ್ವಾತ್ ಇತ್ಯತ ಆಹ ತಾಂ- ಯೋಗಮಿತೀತಿ ॥**

**ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಮ್ ।**
**ಅಪ್ರಮತ್ತಸ್ತದಾ ಭವತಿ ಯೋಗೋ ಹಿ ಪ್ರಭವಾಪ್ಯಯೌ ॥ 11 ॥**

---

★ ಓಂ ಅನಿಯಮಃ ಸರ್ವೇಷಾಂ ಅವಿರೋಧಾತ್ ಶಬ್ದಾನುಮಾನಾಭ್ಯಾಂ ಓಂ ಬ್ರ.ಸೂ. ಅ3, ಸೂತ್ರ 32, ಅಧಿ 19, ಬ್ರಹ್ಮಜ್ಞಾನಿಗಳಲ್ಲಿಯೂ ಕೆಲವರಿಗೆ ಮೋಕ್ಷವಿದೆ ಕೆಲವರಿಗೆ ಇಲ್ಲ ಎಂಬ ವ್ಯತ್ಯಾಸವಿಲ್ಲ, ಅಪರೋಕ್ಷಜ್ಞಾನಿಗಳಲ್ಲಿ ಯಾರಿಗೂ ಸಂಸಾರವಿಲ್ಲ ಎಂದು ಹೇಳಿದುದರಿಂದ ವಿರೋಧವಿಲ್ಲ, ನ ಕಶ್ಚಿತ್ ಬ್ರಹ್ಮವಿದ್ ಸ್ಮೃತಿಮನುಭವತಿ ಎಂಬ ಸ್ಮೃತಿಯಿಂದ ಜ್ಞಾನಿಗಳೆಲ್ಲರಿಗೂ ಮೋಕ್ಷವಿದೆಯೆಂದು ಸಿದ್ಧವಾಗುತ್ತದೆ. ಅಪರೋಕ್ಷ ಜ್ಞಾನಿಗಳಾದುದರಿಂದ ಜ್ಞಾನಿಗಳಿಗೆ ನಿಯತವಾಗಿ ಮೋಕ್ಷವಿದೆ ಎಂದು ಅನುಮಾನದಿಂದಲೂ ಸಿದ್ಧವಾಗುತ್ತದೆ ಎಂದು ಈ ಸೂತ್ರದಲ್ಲಿ ಸಿದ್ಧಾಂತ ಮಾಡಿದ್ದಾರೆ ॥ 9 ॥

ತಾಮಿತ್ಯಸ್ಯ ವಿವರಣಂ ಸ್ಥಿರಮಿಂದ್ರಿಯಧಾರಣಮಿತಿ । ಇಂದ್ರಿಯಾಣಾಂ ವಿಷಯೇಭ್ಯೋ ವ್ಯಾವರ್ತನೇನ ಭಗವದ್ವಿಷಯೇ ಅಚಂಚಲಾಂ ಧಾರಣಾಮೇವ ಧ್ಯಾನಸಮಾಧಿಲಕ್ಷಣಯೋಗಮಿತಿ ಮನ್ಯಂತೇ ಪ್ರಾಜ್ಞಾ ಇತಿ । ತಯೋರನತಿಭೇದಂ ವ್ಯನಕ್ತಿ - ಅಪ್ರಮತ್ತ ಇತಿ । ತಥಾ ಸತ್ಯಪ್ರಮತ್ತೋ ಭವತಿ, ಭಗವಜ್ಜ್ಞಾನೇನೈವ ಭವತೀತ್ಯರ್ಥಃ । ಯೋಗಂ ಮನ್ಯಂತ ಇತ್ಯುಕ್ತಮ್ । ತಸ್ಯ ವಿಷಯ-ಮಾಹ - ಯೋಗೋ ಹೀತಿ । ಪ್ರಭವಾಪ್ಯಯೌ ಉತ್ಪತ್ತಿವಿನಾಶೌ ಜಗತೋ ಭಗವತ್‌ಸಕಾಶಾದ್ ಭವತ ಇತ್ಯೇತದ್ಯೋಗೋ ಹಿ ಧ್ಯಾನರೂಪಭಗವದ್ಯೋಗವಿಷಯೋ ಹೀತಿ ॥ 11 ॥

ನಚಿಕೇತ :- ಹಿಂದೆ ಪ್ರತ್ಯಾಹಾರವನ್ನೇ ಮುಖ್ಯವಾಗಿ ಹೇಳಿದ್ದೀರಿ. ಅದು ಹೇಗೆ ಪರಮ ಸಾಧನವಾಗುತ್ತದೆ. ಪ್ರತ್ಯಾಹಾರಕ್ಕಿಂತ ಬೇರೆಯಾದ ಮತ್ತು ಸಮಾಧಿರೂಪವಾದ ಯೋಗವೇ ಮುಖ್ಯ ಸಾಧನವಾಗಿದೆಯೆಂದು ತಿಳಿದವರು ಹೇಳುತ್ತಾರೆಯಲ್ಲವೇ ?

ಯಮ:- ಹೌದು, ಪ್ರತ್ಯಾಹಾರಕ್ಕೂ ಧ್ಯಾನ - ಸಮಾಧಿಗಳಿಗೂ ಹೆಚ್ಚಿನ ಭೇದವಿಲ್ಲದಿದ್ದುದರಿಂದ ಪ್ರತ್ಯಾಹಾರವನ್ನೇ ಪರಮ ಸಾಧನವೆಂದು ಹೇಳಿದ್ದಾಗಿದೆ. ಇಂದ್ರಿಯಗಳನ್ನು ವಿಷಯಗಳಿಂದ ಹಿಂದಿರುಗಿಸಿ ಪರಮಾತ್ಮನ ವಿಷಯದಲ್ಲಿ ಅಚಂಚಲವಾಗಿ ಇಟ್ಟಿರುವ ಧಾರಣವನ್ನೇ ಧ್ಯಾನ ಮತ್ತು ಸಮಾಧಿ ಎಂದು ತಿಳಿದವರು ಹೇಳುತ್ತಾರೆ. ಈ ಸ್ಥಿತಿಯನ್ನು ಜ್ಞಾನಿಯು ಪರಮಾತ್ಮನ ಹೊರತು ಮತ್ತೇನನ್ನೂ ವಿಷಯೀಕರಿಸುವುದಿಲ್ಲ. ಆದುದರಿಂದ ಧ್ಯಾನ ಸಮಾಧಿಗಳಂತೆ ಧಾರಣವೂ ಪರಮಾತ್ಮವಿಷಯಕವಾದುದರಿಂದ ಧಾರಣವನ್ನು ಧ್ಯಾನಸಮಾಧಿಗಳಿಗಿಂತ ಬೇರೆಯೆಂದು ಹೇಳಲಿಲ್ಲ. ಇಂತಹ ಧಾರಣೆಯಲ್ಲಿ ಜ್ಞಾನಿಯು ಜಗತ್ತಿಗೆ ಪ್ರತಿಕ್ಷಣದ ಉತ್ಪತ್ತಿ ವಿನಾಶಗಳು ಪರಮಾತ್ಮನಿಂದಲೇ ಆಗುತ್ತವೆ ಎಂಬ ವಿಷಯಗಳನ್ನೊಳಗೊಂಡ ಪರಮಜ್ಞಾನವೆಂಬ ಸಾಧನಸಂಪನ್ನನಾಗಿರುತ್ತಾನೆ.

ನ ಚಕ್ಷುಷಾ ಪಶ್ಯತೀತ್ಯುಪಲಕ್ಷಣತ್ವೇನೋಕ್ತಂ ವಿಶದಯತಿ- ನೈವ ವಾಚೇತಿ ।

ನೈವ ವಾಚಾ ನ ಮನಸಾ ಪ್ರಾಪ್ತುಂ ಶಕ್ಯೋ ನ ಚಕ್ಷುಷಾ ।
ಅಸ್ತೀತಿ ಬ್ರುವತೋಽನ್ಯತ್ರ ಕಥಂ ತದುಪಲಭ್ಯತೇ ॥ 12 ॥

ಪ್ರಾಪ್ತುಂ ಜ್ಞಾತುಂ ನ ಶಕ್ಯಃ ಪುರುಷ ಇತ್ಯನುಕರ್ಷಃ । ಕೇನ ತರ್ಹಿ ಜ್ಞೇಯ ಇತ್ಯತೋ ಹೃದೇ-ತ್ಯಾದಿನಾ ಶ್ರವಣಾದಿಕಂ ಪರಮಸಾಧನಂ ಉಕ್ತಂ, ತಸ್ಯ ಗುರುಪ್ರಸಾದರೂಪ ಇತಿಕರ್ತವ್ಯತಾಂ ವ್ಯತಿರೇಕ-ಮುಖೇನಾಹ- ಅಸ್ತೀತಿ । ಅಪರಾಧೀನತಯಾ ಸರ್ವೋತ್ತಮತ್ವೇನ ಅಸ್ತಿ ಪ್ರಕೃತಪುರುಷನಾಮಾ ಭಗ-ವಾನಿತಿ ಬ್ರುವತಃ ಉಪದಿಶತೋ ಗುರೋಃ ಅನ್ಯತ್ರ, ತಥಾ ಉಪದೇಷ್ಟೃಗುರುಂ ವಿನೇತಿ ಯಾವತ್ । ತದ್ಭಗವತೋ ರೂಪಂ ಕಥಂ ಉಪಲಭ್ಯತೇ ನ ಕಥಮಪಿ, ಗುರುಣಾ ಪ್ರೀತಿಪೂರ್ವಂ ಉಪದೇಶೇ ಕೃತೇ ಶ್ರವಣಮನನಾದಿಸ್ವಪ್ರಯತ್ನೇನ ಗುರುಪ್ರಸಾದನಸಹಿತೇನೋಪಲಭ್ಯತೇ ಭಗವಾನಿತಿ । ತದಾಹ ಸೂತ್ರ-ಕಾರಃ 'ಪ್ರದಾನವದೇವ ಹಿ ತದುಕ್ತಮ್' (ಬ್ರ.ಸೂ.3-3-44) ಇತಿ ॥ 12 ॥

ಪರಮಾತ್ಮನನ್ನು ಕಣ್ಣಿನಿಂದ ನೋಡಲಾಗುವುದಿಲ್ಲವೆಂದು ಹಿಂದೆ ಹೇಳಿದೆ. ಅದು ದಿಕ್ಪ್ರದರ್ಶನ ಮಾತ್ರ. ಪರಮಾತ್ಮನನ್ನು ಮಾತಿನಿಂದ ಮತ್ತು ಪ್ರವಚನ ಮೂಲಕವೂ ಹೊಂದಲು ಸಾಧ್ಯವಿಲ್ಲ, ಮನಸ್ಸಿನಿಂದ ಹೊಂದಲು ಸಾಧ್ಯವಿಲ್ಲ, ಕಣ್ಣಿನಿಂದ ನೋಡಲೂ ಸಾಧ್ಯವಿಲ್ಲ.

ಹಿಂದೆ ಹೇಳಿದ ಶ್ರವಣ-ಮನನ ನಿದಿಧ್ಯಾಸನ ಭಕ್ತಿ ಮುಂತಾದ ಸಾಧನಗಳಿಂದ ಕೂಡಿದ ಶುದ್ಧ ಮನಸ್ಸಿನಿಂದಲೇ ನೋಡಲು ಸಾಧ್ಯ. ಆ ರೀತಿಯಾದ ಪರಮಾತ್ಮನ ಧ್ಯಾನಕ್ಕೆ ಗುರುಗಳ ಅನುಗ್ರಹವು ಅತ್ಯಂತ ಸಹಾಯಕವಾದುದೆಂದು ತಿಳಿಯಬೇಕು. ಗುರ್ವನುಗ್ರಹವೇ ಇತಿಕರ್ತವ್ಯತಾ ಅಂದರೆ ಅವಾಂತರ ವ್ಯಾಪಾರದಂತೆ ಇರುತ್ತದೆ.

ಗುರುಗಳು, ಸರ್ವೋತ್ತಮನಾದ ಪರಮಾತ್ಮನು ಅಪರಾಧೀನನಾಗಿ ಇರುತ್ತಾನೆ, ಆ ಭಗವಂತನು ಷಡ್ಗುಣೈಶ್ವರ್ಯ ಸಂಪನ್ನನು ಎಂದು ಉಪದೇಶಿಸುತ್ತಾರೆ. ಹೀಗೆ ಉಪದೇಶಿಸುವ ಗುರುಗಳಿಲ್ಲದೆ ಆ ಪರಮಾತ್ಮನನ್ನು ಯಾವ ಉಪಾಯ-ದಿಂದಲೂ ಯಾವನೂ ಸಾಕ್ಷಾತ್ಕಾರ ಮಾಡಿಕೊಳ್ಳಲಾರನು. ಗುರುಗಳು ಶಿಷ್ಯನ ಭಕ್ತ್ಯಾದಿಗುಣಗಳಿಂದ ಸುಪ್ರಸನ್ನರಾಗಿ ಉಪದೇಶ ಮಾಡಿದಾಗ ಶಿಷ್ಯನು ಶ್ರವಣ - ಮನನ - ಧ್ಯಾನರೂಪವಾದ ಸ್ವಪ್ರಯತ್ನದಿಂದ ಪರಮಾತ್ಮನನ್ನು ಸಾಕ್ಷಾ-ತ್ಕರಿಸಿಕೊಳ್ಳಲು ಸಾಧ್ಯವಾಗುತ್ತದೆ. ಈ ಪ್ರಯತ್ನಕ್ಕೆ ಗುರುಗಳ ಅನುಗ್ರಹವು ಬಹಳ ಮುಖ್ಯವಾದ ಸಹಕಾರಿಕಾರಣ-ವಾಗುತ್ತದೆ.★

**ಸೇತಿಕರ್ತವ್ಯತಾಕಶ್ರವಣಾದಿಸ್ವಪ್ರಯತ್ನಮಾತ್ರಾದೇವ ನೋಪಲಭ್ಯತೇ । ಕಿಂತು ತಜ್ಜನ್ಯಭಗವತ್ಪ್ರಸಾ-ದಾದೇವೇತಿ ಭಾವೇನ ತದ್ಧೇತೂಕ್ತಿಪೂರ್ವಕಮಾಹ - ಅಸ್ತೀತ್ಯೇವೇತಿ ॥**

**ಅಸ್ತೀತ್ಯೇವೋಪಲಬ್ಧವ್ಯಃ ತತ್ತ್ವಭಾವೇನ ಚೋಭಯೋಃ ।**
**ಅಸ್ತಿತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ ॥ 13 ॥**

**ಉಭಯೋಃ ಪ್ರಕೃತಿಪುರುಷಯೋಃ ತತ್ತ್ವಂ ಪ್ರಾಮಾಣಿಕತ್ವಂ ಪ್ರಕೃತಿಪುರುಷಭಾವಂ ವಾ ಭಾವಯತಿ ಸಂಪಾದಯತೀತಿ ತತ್ತ್ವಭಾವೋ ಭಗವಾನ್ ತೇನ, ತತ್ಪ್ರಸಾದೇನ ಇತಿ ಯಾವತ್ । ಸರ್ವಸ್ಮಾದಧಿಕತಯಾ ಅಸ್ತೀತ್ಯೇವ ಜ್ಞಾತವ್ಯಃ । ಪುರುಷ ಇತ್ಯನುಷಂಗಃ । ನ ತು ತತ್ಪ್ರಸಾದೇನ ವಿನಾ । ಮುಕ್ತಿಹೇತುರ್ಭಗವ-ತ್ಪ್ರಸಾದಶ್ಚ ತತ್ಪ್ರಸಾದಜನ್ಯ ಈಶ್ವರವಿಷಯೋಪಲಂಭಾತ್ ಇತ್ಯಾಹ- ಅಸ್ತೀತ್ಯೇವೇತಿ । ಸರ್ವಾಧಿಕತಯಾ-ಽಸ್ತಿತ್ವಾದಸ್ತೀತಿನಾಮಾ ಭಗವಾನ್ ಇತ್ಯುಪಲಬ್ಧಸ್ಯ, ಕರ್ತರಿ ನಿಷ್ಠಾ । ಏವಮುಪಲಭಮಾನಸ್ಯ ತತ್ತ್ವಭಾವಃ ಪ್ರಾಗುಕ್ತವ್ಯುತ್ಪತ್ತ್ಯಾ ಭಗವಾನ್ ಪ್ರಸೀದತಿ ಪರಮಪ್ರಸಾದವಾನ್ ಭವತಿ ॥ 13 ॥**

ನಚಿಕೇತನೇ ! ಹಿಂದೆ ಹೇಳಿದ ಗುರ್ವನುಗ್ರಹವೆಂಬ ಸಹಕಾರಿ ಸಹಿತವಾದ ಶ್ರವಣಮನನ ನಿದಿಧ್ಯಾಸನಗಳೆಂಬ ಪ್ರಯತ್ನಮಾತ್ರದಿಂದಲೇ ಪರಮಾತ್ಮನ ಪ್ರಾಪ್ತಿಯಾಗುವುದಿಲ್ಲ, ಆಯಾ ಜೀವನಲ್ಲಿರುವ ಯೋಗ್ಯವಾದ ತತ್ವಜ್ಞಾನ-

★ ಓಂ ಪ್ರದಾನವದೇವ ಹಿ ತದುಕ್ತಂ ಓಂ ಬ್ರ.ಸೂ. ಅ. 3 ಪಾದ 3, ಸೂತ್ರ 44, ಅಧಿ. 26. ಈ ಸೂತ್ರದಲ್ಲಿ ಗುರುಗಳು ಪ್ರಸನ್ನರಾಗಿ ಉಪದೇಶ ಮಾಡಿದಾಗ ಅ ಉಪದೇಶಹಿತವಾದ ಶ್ರವಣಾದಿಗಳೇ ಅಪರೋಕ್ಷ ಜ್ಞಾನಕ್ಕೆ ಕಾರಣವಾಗುತ್ತವೆ. ಆಚಾರ್ಯವಾನ್ ಪುರುಷೋ ವೇದ (ಛಾ 16-14-2) ಎಂಬ ಶ್ರುತಿಯು ಗುರ್ವನುಗ್ರಹದಿಂದ ಕೂಡಿದ ಜೀವನು ಮಾತ್ರ ಅವಿದ್ಯಾಪಟಲ (ಪೊರೆ)ವನ್ನು ಕಳೆದುಕೊಂಡು ಬ್ರಹ್ಮಜ್ಞಾನವನ್ನು ಪಡೆಯುತ್ತಾನೆ ಎಂದು ಹೇಳಿದೆ.

ಪ್ರಯತ್ನದಿಂದ ಭಗವಂತನು ಪ್ರಸಾದವನ್ನು ಮಾಡಿದಾಗಲೇ ಈ ಜೀವನಿಗೆ ಪರಮಾತ್ಮನ ಪ್ರಸಾದವುಂಟಾಗುತ್ತದೆ. ಪರಮಾತ್ಮನ ಪರಮ ಪ್ರಸಾದವಾದರೋ ಹೇಗೆ ಉಂಟಾಗುತ್ತದೆ ಎಂಬುದನ್ನು ಹೇಳುತ್ತೇನೆ ಕೇಳು.

ಈ ಜಗತ್ತಿನಲ್ಲಿ ಪರಮಾತ್ಮನನ್ನು ಬಿಟ್ಟರೆ ಪ್ರಕೃತಿ ಪುರುಷ ಎಂಬ ಎರಡು ಪದಾರ್ಥಗಳಿರುತ್ತವೆ. ಇವು ಯಾವ ಪ್ರಮಾಣದಿಂದ ಹೇಗೆ ಸಿದ್ಧವಾಗುತ್ತವೆ ಎಂಬುದನ್ನು ಸರಿಯಾಗಿ ಬಲ್ಲವನು ಪರಮಾತ್ಮನು. ಅವನು ಅವೆರಡು ಪದಾರ್ಥಗಳಿಗೂ ಪ್ರಾಮಾಣಿಕತ್ವವನ್ನು ತೋರಿಸಿಕೊಡುವನು. ಪ್ರಕೃತಿಯಲ್ಲಿರುವ ಪ್ರಕೃತಿತ್ವ ಎಂಬ ಧರ್ಮವನ್ನು ಪುರುಷನಲ್ಲಿ ಇರುವ ಪುರುಷತ್ವ ಎಂಬ ಧರ್ಮವನ್ನೂ ನಿಯಮಿಸುವವನೂ ಅವನೇ. ಈ ಗುಣವುಳ್ಳ ಪರಮಾತ್ಮನಿಗೆ ತತ್ತ್ವಭಾವ ಎಂದು ಹೆಸರು. ಇಂತಹ ಪರಮಾತ್ಮನಿಂದಲೇ ಆದ ಅವನ ಪ್ರಸಾದದ ಮೂಲಕ ನಾವು ಅವನನ್ನು ಸರಿಯಾಗಿ ತಿಳಿಯಬೇಕು. ಪರಮಾತ್ಮನು ಎಲ್ಲರಿಗಿಂತಲೂ ಅಧಿಕ ಅಂದರೆ ಸರ್ವೋತ್ತಮನಾಗಿರುವನೆಂದು ತಿಳಿಯಬೇಕು. ಪರಮಾತ್ಮನ ಪ್ರಸಾದವಿಲ್ಲದಿದ್ದರೆ ಅವನು ಸರ್ವೋತ್ತಮನೆಂಬ ದೃಢವಾದ ಜ್ಞಾನವೂ ಬರಲಾರದು. ಹಿಂದೆ ಹೇಳಿದ ಪರಮಾತ್ಮನ ಪ್ರಸಾದದಿಂದ ಸಮೀಚೀನವಾದ ಪರಮಾತ್ಮನ ಅಪರೋಕ್ಷಜ್ಞಾನ ಉಂಟಾದಾಗ ಮೋಕ್ಷಕ್ಕೆ ಕಾರಣವಾದ ಪರಮಪ್ರಸಾದವು ಉಂಟಾಗುತ್ತದೆ ಪರಮಾತ್ಮನು ಸರ್ವೋತ್ತಮನಾಗಿ ಇದ್ದಾನೆ (ಸರ್ವಾಧಿಕತಯಾ ಅಸ್ತಿ) ಎಂದು ತಿಳಿಯುವವನಿಗೆ ಮಾತ್ರ ಭಗವಂತನ ಪರಮಪ್ರಸಾದವಾಗಲು ಸಾಧ್ಯ. ಇತರರಿಗೆ ಈ ಪ್ರಸಾದವು ಸರ್ವಥಾ ದುರ್ಲಭವು. ॥ 13 ॥

**ತಾದೃಶಪ್ರಸಾದಸಾಧ್ಯಂ ಫಲಮಾಹ - ಯದೇತಿ ।**

**ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ ।**
**ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥ 14 ॥**

**ಪರಮಪ್ರಸಾದೇ ಸತಿ ಪಶ್ಚಾದ್, ಯೇ ಹೃದಿ ಸ್ಥಿತಾಃ ಅಂತಃಕರಣಗತಾಃ ಸರ್ವೇ ಕಾಮಾಃ ತೇ ಯದಾ ಪ್ರಮುಚ್ಯಂತೇ, ಕರ್ಮಕರ್ತರಿಪ್ರಯೋಗಃ ಮುಕ್ತಾ ಭವಂತಿ, ಅಪಗಚ್ಛಂತೀತಿ ಯಾವತ್, ಅಥ ಅನಂತರಂ ಮರ್ತ್ಯೋಽಮೃತೋ ಭವತಿ ಮೃತಿಂ ನೈವ ಪ್ರಪದ್ಯತೇ । ಕುತಃ ? ಅತ್ರ ಶ್ವೇತದ್ವೀಪಾದಿಸ್ಥಾನವಿಶೇಷೇ ಬ್ರಹ್ಮ ಸಮಶ್ನುತೇ ಪ್ರಾಪ್ನೋತಿ, ತಸ್ಮಾದಿತಿ ಯೋಜ್ಯಮ್ ॥ 14 ॥**

ಇಂತಹ ಪರಮಪ್ರಸಾದವಾದರೆ ಆಗುವ ಫಲವೇನು ? ಎಂಬ ಶಂಕೆಗೆ ಸಂಯಮಿನೀಪತಿಯು ಸಮಾಧಾನವನ್ನು ಹೇಳುತ್ತಾನೆ.

ಪರಮಾತ್ಮನ ಪರಮಪ್ರಸಾದವಾದ ನಂತರ ಅಂತಃಕರಣದಲ್ಲಿರುವ ಸಂಸಾರಕಾರಣವಾಗಿರುವ ಎಲ್ಲಾ ಕಾಮಗಳೂ (ವಿಷಯ ವಾಸನೆಗಳೂ) ಬಿಟ್ಟುಹೋಗುತ್ತವೆ. ಅನಂತರ ಜೀವನಿಗೆ ಜನ್ಮ ಮುಪ್ಪು ಮರಣಗಳು ಎಂದೂ ಉಂಟಾಗುವುದಿಲ್ಲ. ಈ ಜೀವನು ಪರಮಾತ್ಮನ ಪ್ರಸಾದದಿಂದ ಶ್ವೇತದ್ವೀಪ ಅನಂತಾಸನಾದಿಸ್ಥಾನಗಳಲ್ಲಿ ಪರಮಾತ್ಮನನ್ನು ವಿಶೇಷವಾಗಿ ಸಮೀಪಿಸುತ್ತಾನೆ. ಇದೇ ಪರಮಸಾಧ್ಯವು. ಮಾನವಜನ್ಮದ ಮುಖ್ಯ ಗುರಿಯು.

**ಹೃದಯಗತಸರ್ವಕಾಮತ್ಯಾಗಃ ಕದೇತ್ಯತಃ ತತ್ಕಾರಣಾವಿದ್ಯಾಽಹಂಕಾರಕರ್ಮಣಾಂ ಹೃದಯ-ಗ್ರಂಥೀನಾಂ ಯದಾ ತ್ಯಾಗಃ ತದೇತ್ಯಾಹ- ಯದೇತಿ ।**

**ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ ಗ್ರಂಥಯಃ ।**
**ಅಥ ಮರ್ತ್ಯೋಽಮೃತೋ ಭವತ್ಯೇತಾವದನುಶಾಸನಮ್ ॥ 15 ॥**

**ಇಹ ಮಾನುಷದೇಹೇ ಹೃದಯಸ್ಯ ಸರ್ವೇ ಗ್ರಂಥಯೋ ಹೃದಯಸ್ಥಾವಿದ್ಯಾದಿಗ್ರಂಥಯೋ ಯದಾ ಪ್ರಭಿದ್ಯಂತೇ ಅಪಯಾಂತಿ ಅಥ ತದಾ ಸರ್ವಕಾಮಪ್ರಹಾಣೇನ ಮರ್ತ್ಯಃ ಅಮೃತೋ ಮುಕ್ತೋ ಭವತಿ । ಏತಾವದನುಶಾಸನಂ ನಿಷ್ಕಾಮಕರ್ಮಶ್ರವಣಮನನಧ್ಯಾನಕರ್ತವ್ಯೋಕ್ತಿಪರಂ ಶಾಸ್ತ್ರಮೇತಾವತ್ ॥ 15 ॥**

ನಚಿಕೇತ :- ಗುರುದೇವ ! ಹೃದಯದಲ್ಲಿರುವ ಎಲ್ಲಾ ಕಾಮಗಳು ಯಾವಾಗ ಬಿಟ್ಟುಹೋಗುತ್ತವೆ ? ಅವಿದ್ಯಾ - ಅಹಂಕಾರ - ಕಾಮಕರ್ಮಗಳು ಜೀವನ ಶರೀರಾದಿಗಳು ಇರುವವರೆಗೆ ಇದ್ದೇ ಇರುವುದರಿಂದ ಕಾಮಗಳು ಪೂರ್ತಿಯಾಗಿ ಬಿಟ್ಟು ಹೋಗಲಾರವಷ್ಟೆ ?

ಯಮ:- ಹೌದು. ಈ ಜೀವನಸ್ವರೂಪಕ್ಕೆ ಅವಿದ್ಯಾ ಅಹಂಕಾರ - ಕಾಮಕರ್ಮಗಳು ಗ್ರಂಥಿಗಳು. ಅಂದರೆ ಬಂಧಕವಾದ ಹಗ್ಗದ ಬಲವಾದ ಕಟ್ಟುಗಳಂತೆ ಇರತಕ್ಕವುಗಳು. ಆದರೆ ಈ ಮಾನುಷದೇಹದಲ್ಲಿ ಪರಮಾತ್ಮನ ಪರಮಪ್ರಸಾದದಿಂದ ತತ್ತ್ವಜ್ಞಾನಾಗ್ನಿಯು ಪ್ರದೀಪ್ತವಾದಾಗ ಹೃದಯದಲ್ಲಿರುವ ಅವಿದ್ಯಾದಿ ಗ್ರಂಥಿಗಳು ಚಟಚಟನೆ ಸಿಡಿದು ಭೇದಿಸಿ ದೂರಕ್ಕೆ ಹೋಗಿ ಬೀಳುತ್ತವೆ. ಆಗ ಎಲ್ಲಾ ಕಾಮಗಳು ಜೀವನಿಂದ ದೂರವಾಗುತ್ತವೆ. ಕಾರಣವಿಲ್ಲದಿದ್ದರೆ ಕಾರ್ಯವಾಗುವುದಿಲ್ಲವಷ್ಟೇ ? ಈಗ ಜ್ಞಾನಿಯು ಮುಕ್ತನೆನಿಸಿಕೊಳ್ಳುತ್ತಾನೆ. ನಚಿಕೇತನೆ ! ನಿನಗೆ ನಾನು ಉಪದೇಶ ಮಾಡಬೇಕಾದುದು ಇಷ್ಟೆ !

ಮಾನವನು ನಿಷ್ಕಾಮಕರ್ಮಾಚರಣೆಯನ್ನು ಮಾಡುತ್ತಾ ಶ್ರವಣ ಮನನ ನಿದಿಧ್ಯಾಸನಗಳನ್ನು ಮಾಡಬೇಕೆಂದು ಹೇಳುವ ಶಾಸ್ತ್ರಗಳೂ ಇಷ್ಟನ್ನೇ ಹೇಳುತ್ತವೆ.

**ಏವಂ ಮೋಕ್ಷಹೇತುಬ್ರಹ್ಮವಿದ್ಯಾಂ ಉಕ್ತ್ವಾ ಜ್ಞಾನಿನಃ ಚರಮ ದೇಹಾನ್ನಿಷ್ಕ್ರಮಣೇಽವಶ್ಯಂ ಪೂರ್ವಂ ಧ್ಯೇಯಮಾರ್ಗಮಾಹ- ಶತಮಿತ್ಯಾದಿನಾ ।**

**ಶತಂ ಚೈಕಾ ಚ ಹೃದಯಸ್ಯ ನಾಡ್ಯಃ**
**ತಾಸಾಂ ಮೂರ್ಧಾನಮಭಿನಿಃಸೃತೈಕಾ ।**
**ತಯೋರ್ಧ್ವಮಾಯನ್ನಮೃತತ್ವಮೇತಿ**
**ವಿಷ್ವಗನ್ಯಾ ಉತ್ಕ್ರಮಣೇ ಭವಂತಿ ॥ 16 ॥**

**ಹೃದಯಸ್ಯ ಹೃದಯಸಂಬಂಧಿನ್ಯೋ ನಾಡ್ಯಃ ಶತಂ ಚೈಕಾ ಚ ಏಕೋತ್ತರಶತಂ ನಾಡ್ಯೋ ಭವಂತಿ ॥ ತಾಸಾಂ ಮಧ್ಯೇ ಏಕಾ ನಾಡೀ ಮೂರ್ಧಾನಮಭಿ ಪ್ರತಿನಿಃಸೃತಾ ತಾವತ್ಪರ್ಯಂತಂ ಗತಾ । ತಯಾ ಶತೋತ್ತರಯಾ ಸುಷುಮ್ನಾಖ್ಯಯಾ ಊರ್ಧ್ವಂ ಗಚ್ಛನ್ ಅಮೃತತ್ವಮೇತಿ । ಅನ್ಯಾಶ್ಚ ಶತಂ ನಾಡ್ಯಃ**

**ವಿಷ್ವಕ್ ಉತ್ಕ್ರಮಣೇ ಲೋಕಾಂತಗಮನಾರ್ಥಂ ಭವಂತಿ । ಸುಷುಮ್ನಾಮಾರ್ಗೋ ಜ್ಞಾನಿನಾಂ ಧ್ಯೇಯ ಇತಿ ಭಾವಃ । ತದಾಹ ಸೂತ್ರಕಾರಃ 'ಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ' (ಬ್ರ.ಸೂ. 4-2-17) ಇತಿ ॥ 16 ॥**

ನಚಿಕೇತನೇ, ಈ ರೀತಿ ನಿನಗೆ ಮೋಕ್ಷಕಾರಣವಾದ ಬ್ರಹ್ಮವಿದ್ಯೆಯನ್ನು ಹೇಳಿದ್ದಾಯಿತು. ಈಗ ಅಪರೋಕ್ಷಜ್ಞಾನಿಯು ಚರಮ ದೇಹದಿಂದ ಉತ್ಕ್ರಮಣ ಹೊಂದಿ ಹೋಗುವಾಗ ಅವನಿಗೆ ಅವಶ್ಯವಾಗಿ ತಿಳಿದಿರಬೇಕಾದ ಮತ್ತು ಮನನಮಾಡಲು ಯೋಗ್ಯವಾದ ಉತ್ಕ್ರಾಂತಿ ಮಾರ್ಗವನ್ನು ಹೇಳುತ್ತೇನೆ, ಕೇಳು.

ಜೀವನ ದೇಹದ ಹೃದಯದಿಂದ ಹೊರಡುವ, ಅದಕ್ಕೆ ಸಂಬಂಧ ಪಟ್ಟಂತೆಯೇ ಇರುವ ಒಂದುನೂರ ಒಂದು ಮುಖ್ಯ ನಾಡಿಗಳಿವೆ. ಅವುಗಳಲ್ಲಿ ನೂರೊಂದನೆಯ ನಾಡಿಯು ಮೇಲ್ಮುಖವಾಗಿ ಶಿರಸ್ಸಿನ ಕಡೆಗೆ ಹೋಗುತ್ತದೆ. ಈ ನಾಡಿಗೆ ಸುಷುಮ್ನಾ ಎಂದು ಹೆಸರು. ಅದರ ಮೂಲಕವಾಗಿ ಉತ್ಕ್ರಾಂತಿಹೊಂದಿದ ಜೀವನು ಮೋಕ್ಷವನ್ನು ಹೊಂದುತ್ತಾನೆ. ಉಳಿದ ನೂರು ನಾಡಿಗಳ ಮೂಲಕ ಉತ್ಕ್ರಾಂತಿಹೊಂದಿದ ಜೀವನು ಇತರ ಲೋಕಗಳಿಗೆ ಹೋಗುತ್ತಾನೆ. ಆದುದರಿಂದ ಅಪರೋಕ್ಷ ಜ್ಞಾನಿಗಳು ಸುಷುಮ್ನಾ ನಾಡಿಯ ಮಾರ್ಗವನ್ನು ಸರಿಯಾಗಿ ತಿಳಿದು ಅಲ್ಲಿಯೇ ಪರಮಾತ್ಮನನ್ನು ಧ್ಯಾನಿಸಬೇಕು.★

**ಅನನ್ಯಪ್ರೋಕ್ತೇ ಗತಿರತ್ರ ನಾಸ್ತೀತ್ಯಾದಿನೋಕ್ತಂ ಭೇದಜ್ಞಾನಮೇವ ಮುಕ್ತಿಹೇತುರಿತಿ ಉಪ-ಸಂಹರತಿ- ಅಂಗುಷ್ಠಮಾತ್ರ ಇತಿ ।**

**ಅಂಗುಷ್ಠಮಾತ್ರಃ ಪುರುಷೋಽಂತರಾತ್ಮಾ**
**ಸದಾ ಜನಾನಾಂ ಹೃದಯೇ ಸನ್ನಿವಿಷ್ಟಃ ॥**

**ತಂ ಸ್ವಾಚ್ಛರೀರಾತ್ ಪ್ರವೃಹೇನ್ಮುಂಜಾದಿವೇಷೀಕಾಂ ಧೈರ್ಯೇಣ ।**
**ತಂ ವಿದ್ಯಾಚ್ಛುಕ್ರಮಮೃತಂ ತಂ ವಿದ್ಯಾಚ್ಛುಕ್ರಮಮೃತಮಿತಿ ॥ 17 ॥**

**ಅಂತರಾತ್ಮಾ ಅಂತರ್ವ್ಯಾಪ್ತ ಇತಿ ವಾ, ಅಂತಃಪ್ರೇರಕ ಇತಿ ವಾಽರ್ಥಃ । ಜನಾನಾಂ ಮಾನುಷಾದಿ-ಚೇತನಾನಾಂ ಹೃದಯೇ ಸದಾ ಸಮ್ಯಕ್ ಸುಖೇನೈವ ನಿವಿಷ್ಟಃ ಸ್ಥಿತಃ । ತಂ ಸ್ವಾತ್ ಸ್ವಾತ್ಮರೂಪಾತ್ ಶರೀರಾದ್ ಉಪಲಕ್ಷಣಂ ಜೀವಾದಿತಿ ಯಾವತ್, ಯದ್ವಾ ಸ್ವಾತ್ ಸ್ವಕೀಯಾಜ್ಜೀವರೂಪಾ-**

---

★ ಓಂ ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರಾ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ ಬ್ರ.ಅ.4, ಪಾ 2 ಸೂ. 17, ಅದಿ.9.

ಇಲ್ಲಿ ಜ್ಞಾನಿಗಳ ಉತ್ಕ್ರಮಣದ ಅವ್ಯವಹಿತ - ಪೂರ್ವ ಕಾಲದಲ್ಲಿ ಅವರ ಹೃದಯಕಮಲದ ಅಗ್ರಭಾಗದಲ್ಲಿ ಪರಮಾತ್ಮನ ಅನುಗ್ರಹದಿಂದ ಪ್ರಕಾಶ ಉಂಟಾಗುತ್ತದೆ. ಆದರಿಂದ ಜ್ಞಾನಿಯು ತನ್ನ ಮಾರ್ಗವನ್ನು ಸರಿಯಾಗಿ ತಿಳಿದು ಸ್ವಲ್ಪಪ್ರಾರಬ್ಧವಿದ್ದರೂ ಅಪರೋಕ್ಷಜ್ಞಾನಬಲದಿಂದಲೂ, ಮತ್ತು ಅಪರೋಕ್ಷಜ್ಞಾನಕ್ಕೆ ಇತಿಕರ್ತವ್ಯತಾ ರೂಪವಾದ ತನ್ನ ಹೃದಯದಿಂದ ಬ್ರಹ್ಮ ಪರ್ಯಂತವಾದ ಮಾರ್ಗಸ್ಮರಣೆಯಿಂದಲೂ ದೇಹದಿಂದ ಹೊರಗೆ ಹೊರಡುತ್ತಾನೆ. ಜ್ಞಾನಿಯ ಹೃದಯದಲ್ಲಿರುವ ಪರಮಾತ್ಮನ ಅನುಗ್ರಹವೇ ಈ ರೀತಿಯ ಉತ್ಕ್ರಾಂತಿಗೆ ಮುಖ್ಯ ಕಾರಣವು. ಜ್ಞಾನಿಯು ನೂರೊಂದನೆಯ ಸುಷುಮ್ನಾ ನಾಡಿಯಿಂದ ಉತ್ಕ್ರಮಣ ಹೊಂದುತ್ತಾನೆ. ಎಂದು ಈ ವಿಷಯವನ್ನು ಸ್ಪಷ್ಟಪಡಿಸಿದ್ದಾರೆ.

ಚ್ಛರೀರಾದಿತ್ಯರ್ಥಃ । ಜೀವೋ ಹಿ ಹರಿವಶತ್ವಾತ್ ಹರಿಣಾऽಧಿಷ್ಠಿತತ್ವಾತ್ ಹರೇಃ ಶರೀರಮ್ । ಧೈರ್ಯೇಣ ಧೀರಭಾವೇನ ಸೂಕ್ಷ್ಮದೃಷ್ಟ್ಯೇತಿ ಯಾವತ್ । ಪ್ರವೃಹೇದ್ ವಿವೇಚಯೇತ್ ಭೇದೇನ ಜಾನೀಯಾದಿತಿ ಯಾವತ್ । ಕಥಮ್ ? ಮುಂಜಾದಿವೇಷೀಕಾಂ ಮುಂಜಾಪದೇನ ಮೌಂಜೀ-ಧಾರಣಾರ್ಥಂ ಕ್ರಿಯಮಾಣರಜ್ಜುಸಾಧನತೃಣವಿಶೇಷಃ । ಮುಂಜಾತ್ ಮುಂಜಪುಂಜಮಧ್ಯಾತ್ ಇಷೀಕಾಖ್ಯವಿಜಾತೀಯತೃಣವಿಶೇಷಮಿವೇತಿ । ಯತ್ತು ಸುಧಾಯಾಂ ದೇಹಾತ್ಮತ್ವಂ ಯದಿ ನ ತದ್ ಇತಿ ಭಕ್ತಿಪಾದೀಯ ಅನುವ್ಯಾಖ್ಯಾನಗಮನಿಕಾಯಾಂ ದೇಹಜೀವಪರತಯಾ ವ್ಯಾಖ್ಯಾತಂ, ತತ್-ಪರರೀತ್ಯೈವೇತ್ಯವಿರೋಧಃ ।

ಮುಮುಕ್ಷೋಃ ಶೋಕರಾಹಿತ್ಯಸ್ಯ ಅಮೃತತ್ವಸ್ಯ ಚಾವಶ್ಯಾಪೇಕ್ಷಿತತ್ವಾತ್ತಸ್ಯ ತಾದೃಕ್ತ್ವೇನ ಭಗವಜ್ಜ್ಞಾನೇನೈವ ಭಾವ್ಯತ್ವಾತ್ ತಜ್‌ಜ್ಞಾನಂ ಆವಶ್ಯಕಮಿತಿ ಭಾವೇನಾಹ- ತಮಿತಿ । ತಂ ಜೀವಾದ್ಭಿನ್ನಂ ಶುಕ್ರಂ ಶೋಕಾದಿದೋಷವರ್ಜಿತಂ, ಅಮೃತಂ ನಿತ್ಯಮುಕ್ತಂ, ಅನಾದ್ಯನಂತಕಾಲಂ ಸಂಪೂರ್ಣಸ್ವರೂಪಾನಂದಾನುಭವವಂತಮಿತಿ ಯಾವತ್, ತಾದೃಶಾನುಭವಸ್ಯೈವ ಮುಕ್ತಿಶಬ್ದಾರ್ಥತ್ವಾತ್, ವಿದ್ಯಾಜ್ಜಾನೀ-ಯಾದಿತಿ ।

ಅಭ್ಯಾಸಸ್ತಾತ್ಪರ್ಯಾರ್ಥಃ । ಇತಿಶಬ್ದೋ ವೇದನಪ್ರಕಾರವಾಚೀ ವಾ, ಸಮಾಪ್ತಿವಾಚೀ ವಾ ಧ್ಯೇಯಃ ॥ 17 ॥

ಹಿಂದೆ ಅನನ್ಯಪ್ರೋಕ್ತೇ ಗತಿರತ್ರನಾಸ್ತಿ (ಕಾ.ಅ.1, ವಲ್ಲಿ 2, ಮಂತ್ರ8) ಎಂದು ಜೀವೇಶ್ವರಾಭೇದಜ್ಞಾನಿಯು ಉಪದೇಶಿಸಿದರೆ ಪರಮಾತ್ಮನ ಜ್ಞಾನವು ಉಂಟಾಗುವುದಿಲ್ಲ. ಭೇದಜ್ಞಾನವೇ ಮುಕ್ತಿ ಕಾರಣವೆಂದು ಹೇಳಿದುದನ್ನೇ ಉಪಸಂಹರಿಸುತ್ತಾರೆ.

ಪರಮಾತ್ಮನು ಜೀವನ ಒಳಗೆ ವ್ಯಾಪ್ತನಾಗಿದ್ದು ಅವನಿಗೆ ಪ್ರೇರಕನೂ ಆಗಿರುತ್ತಾನೆ. ಅವನು ಮನುಷ್ಯರೇ ಮೊದಲಾದ ಸರ್ವಚೇತನರ ಹೃದಯದಲ್ಲಿ ಯಾವಾಗಲೂ ಆನಂದದಿಂದ ಸ್ಥಿರವಾಗಿ ನೆಲೆಸಿರುತ್ತಾನೆ. ಅವನನ್ನು ಶರೀರಕ್ಕಿಂತಲೂ, ಜೀವಸ್ವರೂಪಕ್ಕಿಂತಲೂ, ಹಾಗೂ ಜೀವಸ್ವರೂಪವಾದ ಜ್ಞಾನಾನಂದ ಶರೀರಕ್ಕಿಂತಲೂ, ಸೂಕ್ಷ್ಮದೃಷ್ಟಿಯಿಂದ ಬೇರೆಯೆಂದು ತಿಳಿಯಬೇಕು. ಇದಕ್ಕೆ ಬಹಳ ವಿಮರ್ಶವೂ ಬೇಕಾಗುತ್ತದೆ. ಈ ಜೀವನು ಹರಿಯ ಅಧೀನನಾಗಿರುವುದರಿಂದ ಹರಿಗೆ ಶರೀರರೂಪನಾಗಿರುತ್ತಾನೆ ಜೀವನು ತನ್ನ ಶರೀರಕ್ಕಿಂತಲೂ, ಸೂಕ್ಷ್ಮದೃಷ್ಟಿಯಿಂದ ಬೇರೆಯೆಂದು ತಿಳಿಯಬೇಕು. ಇದಕ್ಕೆ ಬಹಳ ವಿಮರ್ಶವೂ ಬೇಕಾಗುತ್ತದೆ. ಈ ಜೀವನು ಹರಿಯ ಅಧೀನನಾಗಿರುವುದರಿಂದ ಹರಿಗೆ ಶರೀರರೂಪನಾಗಿರುತ್ತಾನೆ ಜೀವನು ತನ್ನ ಶರೀರಕ್ಕಿಂತ ಭಿನ್ನವಾಗಿರುವಂತೆ ತನಗೆ ಶರೀರಯಾಗಿರುವ ಪರಮಾತ್ಮನಿಗಿಂತಲೂ ಬೇರೆಯೆಂದು ತಿಳಿಯಬೇಕು. ಮುಂಜವೆಂಬ ಹುಲ್ಲಿನರಾಶಿಯ ಮಧ್ಯದಿಂದ ಈಷೀಕಾ ಎಂಬ ಬೇರೊಂದು ಜಾತಿಯ ಹುಲ್ಲನ್ನು ವಿವೇಕಿಗಳು ಹೇಗೆ ಪ್ರತ್ಯೇಕಿಸುತ್ತಾರೋ ಆದರಂತೆ ಜೀವರಿಗಿಂತ ಪರಮಾತ್ಮನನ್ನು ಭಿನ್ನವೆಂದು ತಿಳಿಯಬೇಕು.★

★ ಆದರೆ ಭಕ್ತಿ ಪಾದದ ದೇಹಾತ್ಮತ್ವಂ ಯದಿ ನತತ್, ಪ್ರಾಪ್ತಂ ಪ್ರತ್ಯಕ್ಷತಃ ಕ್ವಚಿತ್ (ಅಧ್ಯಾಯ 3, ಪಾದ 2, ಅಧಿ 1.) ಎಂಬ ಅನುವ್ಯಾಖ್ಯಾನದ ಗಮನಿಕಾ (ಉಪೋದ್ಘಾತ) ಸುಧೆಯಲ್ಲಿ ದೇಹ ಮತ್ತು ಜೀವ ಪರವಾಗಿ ಈ ಮಂತ್ರವನ್ನು ವ್ಯಾಖ್ಯಾನಿಸಿದ್ದಾರೆ.

ಮುಮುಕ್ಷುವಿಗೆ ದುಃಖರಾಹಿತ್ಯವೂ, ಮರಣರಾಹಿತ್ಯವೂ ಬೇಕಲ್ಲವೇ ? ಅದಕ್ಕಾಗಿ ಪರಮಾತ್ಮನನ್ನು ದುಃಖರಹಿತ ಅಮೃತ ಎಂಬುದಾಗಿ ತಿಳಿದು ಅದರಂತೆ ಉಪಾಸನೆ ಮಾಡಬೇಕು.

ಹೀಗೆ ಜೀವನಿಗಿಂತ ಭಿನ್ನವಾದ ಪರಮಾತ್ಮನನ್ನು ಶೋಕಾದಿ ದೋಷರಹಿತನೆಂದೂ, ನಿತ್ಯಮುಕ್ತನೆಂದೂ ತಿಳಿಯಬೇಕು. ನಿತ್ಯಮುಕ್ತನೆಂದರೆ ಅನಾದ್ಯನಂತ ಕಾಲದಿಂದ ಸಂಪೂರ್ಣವಾದ ಸ್ವರೂಪಾನಂದಾನುಭವಸ್ವರೂಪನು ಎಂದು ಅರ್ಥ. ಜೀವನಿಗೂ ಪರಮಾತ್ಮನ ಅನುಗ್ರಹದಿಂದ ಇಂತಹ ಅನುಭವವೇ ಬರುತ್ತದೆ. ಹೀಗೆ ಪರಮಾತ್ಮನನ್ನು ತಿಳಿಯುವುದೇ ತತ್ತ್ವಜ್ಞಾನವು.

ಇಲ್ಲಿಗೆ ಯಮಧರ್ಮರಾಜನು ನಚಿಕೇತಕುಮಾರನಿಗೆ ಮಾಡಿದ ಉಪದೇಶವು ಮುಗಿಯಿತು.

ಈ ಮಂತ್ರದಲ್ಲಿ ದ್ವಿರುಕ್ತಿಯು ಮೇಲೆ ಹೇಳಿರುವ ವಿಷಯದಲ್ಲಿ ತಾತ್ಪರ್ಯವಿದೆ ಎಂದು ತಿಳಿಸುವುದಕ್ಕಾಗಿದೆ.

**ಏವಂ ಬ್ರಹ್ಮವಿದ್ಯಾಂ ಪ್ರಾಪ್ಯ ನಾಚಿಕೇತಃ ಕಿಂ ಅಭೂತ್ ಇತ್ಯತೋ ವೇದಪುರುಷೋ ವಕ್ತಿ – ಮೃತ್ಯುಪ್ರೋಕ್ತಾಂ ಇತಿ ॥**

**ಮೃತ್ಯುಪ್ರೋಕ್ತಾಂ ನಾಚಿಕೇತೋಽಥ ಲಬ್ಧ್ವಾ**
**ವಿದ್ಯಾಮೇತಾಂ ಯೋಗವಿಧಿಂ ಚ ಕೃತ್ಸ್ನಮ್ ।**
**ಬ್ರಹ್ಮಪ್ರಾಪ್ತೋ ವಿರಜೋಽಭೂದ್ವಿಮೃತ್ಯುಃ**
**ಅನ್ಯೋಽಪ್ಯೇವಂ ಯೋ ವಿದಧ್ಯಾತ್ಮಮೇವ ॥ 18 ॥**

***॥ ಇತಿ ಕಾಠಕೋಪನಿಷತ್ ಸಂಪೂರ್ಣಾ ॥***

**ಕೃತ್ಸ್ನಂ ಯೋ ವಿಧಿಂ ಚ ಪ್ರತ್ಯಾಹಾರಾದಿಭಗವತ್‌ಜ್ಞಾನೋಪಾಯವಿಧಿಂ ಚ ಲಬ್ಧ್ವಾ ಅನುಷ್ಠಾಯ ವಿರಜೋ ನಿಷ್ಪಾಪಸ್ಸನ್ ಬ್ರಹ್ಮ ಪ್ರಾಪ್ನೋತಿ । ವಿಮೃತ್ಯುರಪಗತಮೃತ್ಯುಃ ಅಮೃತೋಽಭೂತ್ । ಅನ್ಯೋಽಪಿ ಯೋಽಧ್ಯಾತ್ಮವಿತ್ ಸೋಽಪ್ಯೇವಮೇವ ಭವತ್ಯೇವೇತಿ ॥**

***॥ ಇತಿ ಶ್ರೀರಾಘವೇಂದ್ರ ಯತಿಕೃತ ಕಾಠಕೋಪನಿಷತ್‌ಖಂಡಾರ್ಥಃ ಸಂಪೂರ್ಣಃ ॥***

ಹೀಗೆ ಬ್ರಹ್ಮವಿದ್ಯೆಯನ್ನು ಹೊಂದಿದ ನಚಿಕೇತನು ಏನಾದನು ಎಂಬ ಶಂಕೆಗೆ ಉಪನಿಷನ್ಮಾತೆಯು ಉತ್ತರ ಹೇಳುತ್ತಾಳೆ.

ಮೃತ್ಯುನಿಯಾಮಕ ಯಮಧರ್ಮರಾಜನಿಂದ ಉಕ್ತವಾದ ಈ ಉತ್ತಮವಾದ ಅಧ್ಯಾತ್ಮವಿದ್ಯೆಯನ್ನು ನಚಿಕೇತನು ಸರಿಯಾಗಿ ತಿಳಿದನು. ಮತ್ತು ಆ ಗುರುವಿನ ಮೂಲಕವಾಗಿಯೇ ಪ್ರತ್ಯಾಹಾರ ಧ್ಯಾನ ಧಾರಣಾ ಸಮಾಧಿಗಳೆಂಬ

---

(ದೇಹಸ್ಯ ಆತ್ಮತ್ವಂ ಪ್ರತ್ಯಕ್ಷಪ್ರಾಪ್ತಮಪಿ – ತಂ ಸ್ವಾಚ್ಛರೀರಾತ್ ಪ್ರವೃಹೇತ್ ಇತ್ಯಾಗಮೇನ – ಬಾಧಿತಂ ದೃಷ್ಟಂ ! ಎಂಬ ಸುಧಾದಲ್ಲಿ ದೇಹವೇ ಆತ್ಮವೆಂದು ಪ್ರತ್ಯಕ್ಷದಿಂದ ತಿಳಿದರೂ ಜೀವನನ್ನು ಶರೀರಕ್ಕಿಂತ ಭಿನ್ನನಾಗಿದ್ದಾನೆಂದು ಆಗಮದಿಂದ ತಿಳಿಯಬೇಕೆಂದು ಹೇಳಿದ್ದಾರೆ.) ಸುಧಾ ಪತ್ರ 488. (ಹೀಗೆ ಈ ಮಂತ್ರ ಭಾಗಕ್ಕೆ ಬೇರೆ ಅರ್ಥವನ್ನು ಹೇಳಿದ್ದರೂ ಅದು ಪರ ರೀತಿಯಿಂದ ಎಂದು ತಿಳಿಯಬೇಕು.)

ಯೋಗಗಳನ್ನು ಸಂಪೂರ್ಣವಾಗಿ ತಿಳಿದು ಅನುಷ್ಠಾನ ಮಾಡಿದನು. ಇದರಿಂದ ಅವನು ಪಾಪರಹಿತನಾಗಿ ಪರಬ್ರಹ್ಮನನ್ನು ಪಡೆದನು. ಮರಣರಹಿತನಾಗಿ ಮುಕ್ತನೆನಿಸಿಕೊಂಡನು.

ಹೀಗೆ ಅಧ್ಯಾತ್ಮಶಾಸ್ತ್ರನಿಷ್ಠನಾದ ಇತರ ಜ್ಞಾನಿಯೂ ನಚಿಕೇತ ನಂತೆಯೇ ಮುಕ್ತನಾಗುತ್ತಾನೆ.

*ಇಲ್ಲಿಗೆ ಎರಡನೇ ಅಧ್ಯಾಯದ ಮೂರನೇ ವಲ್ಲಿಯು ಸಮಾಪ್ತವಾಯಿತು.*

**ಶ್ರೀರಾಯರ ಉತ್ತರ ಮಂಗಳಾಚರಣೆ :**

**ನಿರ್ದೋಷಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।**
**ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥**

**ಇತಿ ಶ್ರೀ ಕಾಠಕಾರ್ಥಾನಾಂ ಸಂಗ್ರಹೋಽಕಾರಿ ಯನ್ಮಯಾ ।**
**ರಾಘವೇಂದ್ರೇಣ ಯತಿನಾ ಪ್ರೀಯತಾಂ ತೇನ ಕೇಶವಃ ॥**

ಸಮಸ್ತ ದೋಷಗಳಿಂದ ಸ್ವಾಭಾವಿಕವಾಗಿ ದೂರನಾದ ದೋಷರಹಿತವಾದ ಸಮಸ್ತಗುಣಗಳಿಂದ ತುಂಬಿರುವ ಲಕ್ಷ್ಮೀದೇವಿ - ಪ್ರಾಣದೇವರುಗಳಿಗೆ ಸ್ವಾಮಿಯಾದ ಭಕ್ತರ ಅಭೀಷ್ಟವನ್ನು ಕೊಡುವ ವ್ಯಾಪ್ತನಾದ ವಿಷ್ಣುವಿಗೆ ನಮಸ್ಕಾರ.

ನಾನು ರಚಿಸಿದ ಈ ಕಾಠಕಮಂತ್ರಗಳ ಅರ್ಥಸಂಗ್ರಹದಿಂದ ಬ್ರಹ್ಮರುದ್ರಾದಿದೇವತೆಗಳಿಗೆ ಪ್ರವರ್ತಕನಾದ ಭಗವಂತನು ಪ್ರೀತನಾಗಲಿ.

*ಇಲ್ಲಿಗೆ ಕಾಠಕ ಖಂಡಾರ್ಥವು ಸಂಪೂರ್ಣವಾಯಿತು.*

**॥ ಶ್ರೀಕೃಷ್ಣಾರ್ಪಣಮಸ್ತು ॥**

★ ★ ★

## ಗುರುರಾಜರ ಶೈಲಿ ಮತ್ತು ಪ್ರಮಾಣೋದಾಹರಣ

ಶ್ರೀ ರಾಯರು ಜೀವನದಲ್ಲಿ ಎಷ್ಟು ಸರಳರೋ ಗ್ರಂಥಗಳಲ್ಲಿಯೂ ಹಾಗೆಯೇ. ಅವರು ಎಲ್ಲಿಯೂ ಆಡಂಬರವನ್ನು ತೋರಿಸುವುದಿಲ್ಲ. ಎಷ್ಟೋ ದೊಡ್ಡ ಗ್ರಂಥಕ್ಕೆ ವ್ಯಾಖ್ಯಾನ ಬರೆಯಲಿ, ಅನುಷ್ಟುಪ್ ವೃತ್ತದಿಂದಲೇ ಆದಿಮಂಗಳ ಮತ್ತು ಅದೇ ವೃತ್ತದಿಂದಲೇ ಅಂತಿಮಮಂಗಳವನ್ನು ಮಾಡುತ್ತಾರೆ. ಪ್ರಕೃತ ಈ ಕಾಠಕೋಪನಿಷತ್ತಿನ ಮಂಗಳ ನೋಡಿರಿ, ಎಷ್ಟು ಚಿಕ್ಕದು –

**ಸಮಸ್ತ ಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।**
**ನಮಃ ಶ್ರೀಪ್ರಾಣನಾಥಾಯ ವಾಮನಾಯೇಷ್ಟದಾಯಿನೇ ॥**

ಅಂತಿಮ ಮಂಗಳವೂ ಹಾಗೆಯೇ –

**ನಿರ್ದೋಷಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।**
**ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥**

ಸಾಮಾನ್ಯವಾಗಿ ಪ್ರತಿಯೊಂದು ಮಂತ್ರಕ್ಕೂ ಒಂದು ಸಣ್ಣ ಅವತರಣಿಕೆ, ಭಾಷ್ಯ ಟೀಕಾಗಳಿಗೆ ಅವಿರುದ್ಧವಾದ ಅರ್ಥಕಥನ, ಸಂಮತಿ ಪ್ರದರ್ಶನ ಇಷ್ಟನ್ನು ಮಾಡುತ್ತಾ ಅವರು ಎಲ್ಲಿಯೂ ನಿಲ್ಲದೆ ಮುಂದುವರಿಯುತ್ತಾ ಇರುತ್ತಾರೆ. ವಿಗ್ರಹ ಮತ್ತು ವ್ಯಾಕರಣವಿಶೇಷಗಳನ್ನು ಬರೆಯುವುದನ್ನು ಅವರು ಎಂದೂ ಮರೆಯುವುದಿಲ್ಲ, ವ್ಯಾಕರಣದಲ್ಲಿ ಅವರಿಗೆ ವಿಶೇಷ ದೃಷ್ಟಿ

ಉಪನಿಷತ್ತುಗಳ ಅರ್ಥವನ್ನು ನ್ಯಾಯಗಳಿಂದ ನಿರ್ಣಯಿಸಲು ಬ್ರಹ್ಮಮೀಮಾಂಸಾ ಶಾಸ್ತ್ರವು ಹೊರಟಿದೆ. ಆದುದರಿಂದ ರಾಯರು ಈ ಉಪನಿಷತ್ತಿನ ವಾಕ್ಯಗಳನ್ನು ಹಿಡಿದು ಎಲ್ಲೆಲ್ಲಿ ವಿಷಯವಿಚಾರ ಮಾಡಿರುತ್ತಾರೋ, ಅಂತಹ ಸೂತ್ರಗಳನ್ನೆಲ್ಲಾ ಕೊಟ್ಟಿದ್ದಾರೆ. ಅಲ್ಲಲ್ಲಿ ವಿಶೇಷಾಂಶಗಳನ್ನು ಬರೆದು ಸಂದೇಹ ಪರಿಹಾರಮಾಡಿದ್ದಾರೆ. ಹೀಗೆ ಈ ಖಂಡಾರ್ಥವು ಅತ್ಯುತ್ತಮವಾದ ಒಂದು ಕ್ರಮದಿಂದ ಉಪನಿಷದರ್ಥ ಬೋಧಕವಾದ ಕೈಗನ್ನಡಿಯಂತಿದೆ.

ಉದಾಹೃತ ಪ್ರಮಾಣಗಳು –

1. ಬ್ರಹ್ಮಸೂತ್ರ.
2. ಬ್ರಹ್ಮಸೂತ್ರ ಭಾಷ್ಯ.
3. ಅನುವ್ಯಾಖ್ಯಾನ.
4. ನ್ಯಾಯಸುಧಾ.
5. ವೇದ.
6. ಭಾಗವತ.
7. ವ್ಯಾಕರಣ (ಅಷ್ಟಾಧ್ಯಾಯಿ).
8. ಧಾತುಪಾಠ.
9. ಕಾಠಕಭಾಷ್ಯ.

॥ ಶ್ರೀಕೃಷ್ಣಾರ್ಪಣಮಸ್ತು ॥

